# ಮಂಡೋದರಿ

ಸಿ. ಕೆ. ವೆಂಕಟರಾಮಯ್ಯ,
ಎಂ.ಎ., ಎಲ್ಎಲ್.ಬಿ.

# ಮುನ್ನುಡಿ

ಯಾರ ನಾಮಸ್ಮರಣೆಯಿಂದ ಮಹಾಪಾತಕಗಳೂ ನಾಶವಾಗುವು ವೆಂದು ಆರ್ಯರು ಹಾಡಿದರೋ ಆ ಮಹಾಪತಿವ್ರತೆಯರಲ್ಲೊಬ್ಬಳಾದ ಮಂಡೋದರಿಯನ್ನೇ ಪ್ರಧಾನ ಪಾತ್ರವಾಗಿಟ್ಟುಕೊಂಡು ಈ ನಾಟಕವು ರಚಿತವಾಗಿದೆ.

ವಾಲ್ಮೀಕಿ ರಾಮಾಯಣದ ಕಥೆಗೂ ಇಲ್ಲಿಯ ಕಥೆಗೂ, ಸ್ವಲ್ಪ ವ್ಯತ್ಯಾಸವಿದೆ. ಕಥಾವಸ್ತುವಿನಲ್ಲಿ, ಬಗೆ ಬಗೆಯ ವ್ಯತ್ಯಾಸವುಳ್ಳ ಆನಂದ ರಾಮಾಯಣ, ವಾಲ್ಮೀಕಿ ರಾಮಾಯಣ, ಅದ್ಭುತ ರಾಮಾಯಣ ಮೊದ ಲಾದ ನಾನಾ ರಾಮಾಯಣಗಳ ಪರಿಚಯವುಳ್ಳವರು ಈ ವ್ಯತ್ಯಾಸಗಳನ್ನು ಅಷ್ಟಾಗಿ ಗಮನಿಸರೆಂದು ನನ್ನ ನಂಬಿಕೆ. ಅಲ್ಲದೆ, ಶ್ರವ್ಯ ಕಾವ್ಯವು ದೃಶ್ಯ ಕಾವ್ಯವಾಗಿ ಚಿತ್ರಿತವಾಗುವಾಗ—ಅಂದಿನ ಮಂಡೋದರಿಯು ಇಂದು ಇಲ್ಲಿ ಮತ್ತೆ ಅವತರಿಸುವಾಗ—ಕೊಂಚ ಹೆಚ್ಚು ಕಡಮೆಯಾಗದಿರುವುದು ಹೇಗೆ? ಆದರೂ ನಷ್ಟವೇನು? ದೊಡ್ಡ ದೊಡ್ಡ ಘಟನೆಗಳಲ್ಲಿ ಸಮೂಲ ವಾಗಿ ಮಾರ್ಪಾಡುಗಳನ್ನು ಮಾಡಿ ವಾಲ್ಮೀಕಿ ರಾಮಾಯಣದ ಕಥೆಯನ್ನೇನೂ ಇಲ್ಲಿ ವಿರೂಪಗೊಳಿಸಿಲ್ಲ. ರಾವಣನಿಗೆ ಒಂದೇ ಒಂದು ತಲೆಯಿದ್ದು ಮುಂದೆ ಮಹೇಶ್ವರನ ವರದಿಂದ ಹತ್ತು ತಲೆಗಳು ಬರುವಂತಾದ ಸಂಗತಿ ಆನಂದಗೆ ರಾಮಾಯಣವು ಆಧಾರವಾಗಿದೆ. ರಾವಣನಿಗಿದ್ದುದು ಹತ್ತು ಕಿರೀಟಗಳೇ ಹೊರತು, ಹತ್ತು ತಲೆಗಳಲ್ಲವೆಂದು ಸಿಂಹಳದ್ವೀಪದಲ್ಲಿ (ಸಿಲೋನಿನಲ್ಲಿ) ಐತಿಹ್ಯವಿದೆಯಂತೆ.

ಈ ನಾಟಕವನ್ನು ಬರೆಯಬೇಕೆಂದು ಸೂಚಿಸಿ ಪ್ರೋತ್ಸಾಹಿಸಿದವರು ಶ್ರೀಮಾನ್ ಎಸ್. ಜಿ. ಶಾಸ್ತ್ರಿಗಳು. ಗ್ರಂಥವು ರಚಿತವಾದಮೇಲೆ ಅವರೂ, ಶ್ರೀಮಾನ್ ತಾಡಪತ್ರಿ ರಾಘವಾಚಾರ್ಯರೂ ಅದನ್ನು ಪರಾಂಬರಿಸಿ ಅಲ್ಲಲ್ಲಿ ಅದನ್ನು ಉತ್ತಮಗೊಳಿಸಲು ಅಮೋಘವಾದ ಸಲಹೆಗಳನ್ನು ಕೊಟ್ಟಿದ್ದಾರೆ. ಇತರ ಅನೇಕ ಮಿತ್ರರೂ, ಹಿರಿಯರೂ ಗ್ರಂಥವನ್ನು ಓದಿ, ಓದಿಸಿ ಕೇಳಿ, ಉತ್ತಮವಾದ ಕೆಲವು ಸಲಹೆಗಳನ್ನಿತ್ತರು. ಈ ಮಹನೀಯರುಗಳೆಲ್ಲರಿಗೂ ನನ್ನ ಅನಂತಾನಂತ ವಂದನೆಗಳನ್ನರ್ಪಿಸುತ್ತೇನೆ. ಗ್ರಂಥವನ್ನು ಅತ್ಯಲ್ಪ

ಕಾಲದಲ್ಲೇ ಅಂದವಾಗಿ ಮುದ್ರಿಸಿಕೊಟ್ಟುದಕ್ಕಾಗಿ ಬೆಂಗಳೂರು ಪ್ರೆಸ್ಸಿನವರಿಗೆ ನನ್ನ ವಂದನೆಗಳನ್ನು ಸಲ್ಲಿಸುವೆನು.

ಸಹೃದಯರಾದ ಕನ್ನಡಿಗರಿಗೆ ಈ ಗ್ರಂಥದಿಂದ ಅಲ್ಪ ಸ್ವಲ್ಪ ಸಂತೋಷವೇನಾದರೂ ಆದಲ್ಲಿ, ನನ್ನ ಶ್ರಮವು ಸಾರ್ಥಕವಾಯಿತೆಂದೆಣಿಸುವೆನು.

ಬೆಂಗಳೂರು
೬–೫–೧೯೩೧.

**ಸಿ. ಕೆ. ವೆಂಕಟರಾಮಯ್ಯ**

---

# ಎರಡನೆಯ ಮುದ್ರಣದ ಪೀಠಿಕೆ

ಈ ನಾಟಕದ ಮೊದಲನೆಯ ಮುದ್ರಣದ ಪ್ರತಿಗಳು ಮುಗಿದುಹೋಗಿ ಎರಡನೆಯ ಮುದ್ರಣಕ್ಕೆ ಅವಕಾಶವಾದುದಕ್ಕಾಗಿ ನಾನು ಹರ್ಷಿಸುವೆನು; ಅಲ್ಲದೆ ದೇಶಬಾಂಧವರಾದ ಕನ್ನಡಿಗರಿಗೆ ಕೃತಜ್ಞನಾಗಿರುವೆನು. ಈ ಪೀಠಿಕೆಯನ್ನು ಬರೆಯುತ್ತಿರುವುದೂ ಸಹ, ಕೃತಜ್ಞತೆಯ ಪುಷ್ಪಾಂಜಲಿಯನ್ನೊಪ್ಪಿಸುವುದಕ್ಕಾಗಿಯೇ.

ಬೆಂಗಳೂರಿನ "ಅಮೆಚೂರ್ ಡ್ರಮ್ಯಾಟಿಕ್ ಅಸೋಸಿಯೇಷನ್" ನಾಟ್ಯವಿಲಾಸಿ ಸಂಘದವರು ಈ ನಾಟಕವನ್ನು ಅಭಿನಯಿಸಿ ಉಪಕರಿಸಿದರು. ಬೆಂಗಳೂರು ನಗರದಲ್ಲಿ ಕಲಾಸಿಪಾಳ್ಯದಲ್ಲಿದ್ದ ನಾಟಕ ಮಂದಿರದಲ್ಲಿ ಅವರು ಅದನ್ನಾಡಿದ ದಿನ, ಆಗ್ಗೆ ದಿವಾನ್ ಪದವಿಯನ್ನಲಂಕರಿಸಿದ್ದ ರಾಜಕಾರ್ಯ ಪ್ರಸಕ್ತ ಸರ್ ಎಂ. ಎನ್. ಕೃಷ್ಣರಾಯರವರು ಅಧ್ಯಕ್ಷತೆ ವಹಿಸಿ ಕೃಪೆಮಾಡಿದರು. ಜ್ಞಾನವೃದ್ಧರೂ ವಯೋವೃದ್ಧರೂ ಆದ ಆ ಮಹನೀಯರು ನಾಟಕಾಭಿನಯವು ಪೂರೈಸಿದಮೇಲೆ ಮಾತ್ರವೇ ಅಲ್ಲದೆ, ಮಾರನೆಯ ದಿನ ಕೂಡ ನನ್ನನ್ನು ಬರಮಾಡಿಕೊಂಡು ನಾಟಕದ ವಿಷಯದಲ್ಲಿ ತಮ್ಮ ಮೆಚ್ಚಿಕೆಯನ್ನು ಸೂಚಿಸಿ ಆಶೀರ್ವದಿಸಿದರು. ಅವರ ಮೆಚ್ಚಿಕೆಯ ಮಾತುಗಳಿಗಾಗಿ ನಾನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ಅವುಗಳಿಂದ ನನಗೆ ಅಮಿತವಾದ ಉತ್ಸಾಹವುಂಟಾಯಿತು. ಆಳಿದ ಮಹಾಸ್ವಾಮಿಯವರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ. ಮಹಾಪ್ರಭುಗಳವರು ದಯೆಪಾಲಿಸಿದ ಆಜ್ಞೆಯ

ಮೇರೆಗೆ ಅನಂತರ ಅರಮನೆಯಲ್ಲಿ ನಾಟಕ ಪ್ರದರ್ಶನವು ನಡೆದು ಮೆಚ್ಚಿಕೆಗೆ ಪಾತ್ರವಾದ ಸುಯೋಗವು ಲಭಿಸಿತು. ಮಹಾಪ್ರಭುಗಳ ಸಮ್ಮುಖದ ಶ್ರೇಷ್ಠ ಅಧಿಕಾರಿಗಳಲ್ಲೊಬ್ಬರಾಗಿದ್ದ ಹಿಂದಿನ ದರ್ಬಾರು ಬಕ್ಷಿಗಳವರು ಶ್ರೀಮಾನ್ ಎಚ್. ಲಿಂಗರಾಜ ಅರಸಿನವರು ರಾಜಕುಟುಂಬದವರೊಡನೆ ಮಂಡಿಸಿ ನಾಟಕಾವಲೋಕನಮಾಡಿ ದಯಮಾಡಿ, "ನಾನು ನಿಮಗೆ ಇಷ್ಟು ತಿಳಿಸಬೇಕಾಗಿದೆ: ಇದು ಹೊಸ ದಾರಿಯ ನಾಟಕ. ಹೊಸ ಬೆಳಕಿನ ನಾಟಕ. ನಾಟಕ ಮುಗಿದಮೇಲೆ ನಮ್ಮ ಮನಸ್ಸು ಈ ಪ್ರಪಂಚಕ್ಕೆ ಬರುವುದಕ್ಕೂ ನಾವುಗಳೆಲ್ಲಿರುವೆವೆಂಬುದನ್ನರಿಯುವುದಕ್ಕೂ ಐದಾರು ನಿಮಿಷಗಳೇ ಹಿಡಿದಿರಬಹುದು" ಎಂದ ಮಾತುಗಳನ್ನು ನಾನು ಕೃತಜ್ಞತೆಯಿಂದ ಸ್ಮರಿಸುವೆನು. ಈಗಿನ ದಿವಾನರವರಾದ ರಾಜಮಂತ್ರಪ್ರವೀಣ ಶ್ರೀಮಾನ್ ಎನ್. ಮಾಧವರಾಯರವರೂ, ರಾಜಕಾರ್ಯಪ್ರವೀಣ ಶ್ರೀಮಾನ್ ಎನ್. ಎಸ್. ಸುಬ್ಬರಾಯರವರೂ, ಶ್ರೀಮಾನ್ ನವರತ್ನ ರಾಮರಾಯರವರೂ, ಶ್ರೀಮಾನ್ ವಿ. ಸುಬ್ರಹ್ಮಣ್ಯಐಯರವರೂ, ಶ್ರೀಮಾನ್ ಎಂ. ಹಿರಿಯಣ್ಣನವರೂ, ಶ್ರೀಮಾನ್ ಎನ್. ವೆಂಕಟೇಶ ಐಯಂಗಾರ್ಯರವರೂ, ರಾಜಸೇವಾಸಕ್ತ ಶ್ರೀಮಾನ್ ಬೆಳ್ಳಾವೆ ವೆಂಕಟನಾರಾಯಣಪ್ಪನವರೂ, ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರೂ, ಇತರ ಅನೇಕ ಮಂದಿ ವಿದ್ವನ್ಮಣಿಗಳೂ ತಮ್ಮ ಮೆಚ್ಚಿಕೆಯನ್ನುಸೂಚಿಸಿ, ಪ್ರೋತ್ಸಾಹವನ್ನಿತ್ತು ಉಪಕರಿಸಿದ್ದಾರೆ. ಇದಕ್ಕಾಗಿ ನಾನು ಎಂದೆಂದಿಗೂ ಕೃತಜ್ಞನಾಗಿರುವೆನು. ನಾನು ಮೊದಲಣ ಮುದ್ರಣದ ಮುನ್ನುಡಿಯಲ್ಲಿ ಸೂಚಿಸಿರುವಂತೆ, ಈ ನಾಟಕವನ್ನು ಬರೆಯಬೇಕೆಂದು ತಿಳಿಸಿ, ನಾಟಕವು ಸಿದ್ಧವಾದಮೇಲೆ ಓದಿ ಸಂತೋಷಿಸಿದುದೂ ಅಲ್ಲದೆ, ರೈಟ್ ಆನರಬಲ್ ವಿ. ಎಸ್. ಶ್ರೀನಿವಾಸಶಾಸ್ತ್ರೀ, ಪಿ.ಸಿ., ಸಿ.ಎಚ್., ಅವರ ಪರಿಚಯ ಲಾಭವನ್ನು ಮಾಡಿಸಿಕೊಟ್ಟು, ಅವರಲ್ಲಿ ನಾನು ಇಂಗ್ಲಿಷ್ ಭಾಷೆಯಲ್ಲಿ ಈ ನಾಟಕದ ಸಾರಾಂಶವನ್ನು ಶ್ರುತಪಡಿಸುವ ಸಂಯೋಗವನ್ನು ಕಲ್ಪಿಸಿಕೊಟ್ಟ ಉಪಕಾರವು, ನನ್ನ ಮಾನ್ಯ ಮಿತ್ರರಾದ ಶ್ರೀಮಾನ್ ಎಸ್. ಜಿ. ಶಾಸ್ತ್ರಿಗಳವರದು. ರೈಟ್ ಆನರಬಲ್ ಶ್ರೀನಿವಾಸಶಾಸ್ತ್ರಿಗಳು ತಮ್ಮ ಮೆಚ್ಚಿಕೆಯನ್ನು ತಿಳಿಸಿದುದೂ ಅಲ್ಲದೆ, ನಾರದ ಮಹರ್ಷಿಯ ನಿಜಸ್ವಭಾವವು ಈ ನಾಟಕದಲ್ಲಿ ಚಿತ್ರಿತವಾಗಿರುವುದೆಂದು ತಮ್ಮ ಮೆಚ್ಚಿಕೆಯನ್ನು ತಿಳಿಸಿ

ಮಂಡೋದರೀ ಪಾತ್ರವು ತಮ್ಮ ಮನಸ್ಸಿಗೆ ಬಹಳ ಹರ್ಷವನ್ನುಂಟುಮಾಡಿ ತೆಂದೂ ಸೂಚಿಸಿದರು; 'ಬ್ರಹ್ಮವಾದಿನಿ' ಯೆಂಬ ನಾಟಕವನ್ನು ನಾನು ಬರೆಯ ಬೇಕೆಂದು ವಿಶ್ವಾಸದಿಂದ ಸಲಹೆಯನ್ನಿತ್ತರು. ನನ್ನ ಮಿತ್ರರಾದ ಶ್ರೀಮಾನ್ ದೇವುಡು ನರಸಿಂಹಶಾಸ್ತ್ರಿಗಳು, ಶ್ರೀಮಾನ್ ವಿ. ಜಿ. ಕುಲಕರ್ಣಿಯವರು, ಶ್ರೀಮಾನ್ ಪಡಕೋಣೆ ರಮಾನಂದರಾಯರು, ಶ್ರೀಮಾನ್ ಎಂ. ಎಸ್. ಸುಬ್ರಹ್ಮಣ್ಯಶಾಸ್ತ್ರಿಗಳು ಮುಂತಾದ ಇತರ ವಿದ್ವಾಂಸರನೇಕರ ಶ್ಲಾಘನೆಯ ಉಪಕಾರವೂ ಲಭಿಸಿದೆ. ಮಂಗಳೂರು, ರಾಣಿಬೆನ್ನೂರು, ಚನ್ನರಾಯ ಪಟ್ಟಣ, ಬಾಗಲಕೋಟೆ ಮುಂತಾದ ಅನೇಕ ಸ್ಥಳಗಳ ಕಲಾಪ್ರೇಮಿಗಳು ಈ ನಾಟಕವನ್ನು ಅಭಿನಯಿಸಿ ಉಪಕರಿಸಿದ್ದಾರೆ. "ಜಯಕರ್ನಾಟಕ", "ತಾಯಿನಾಡು", "ಪ್ರೇಮ", "ಮಕ್ಕಳ ಪುಸ್ತಕ", "ರಂಗಭೂಮಿ", "ಸುಬೋಧ", "ವಿಶ್ವಕರ್ಣಾಟಕ" ಮುಂತಾದ ಕನ್ನಡ ಪತ್ರಿಕೆಗಳು ನನ್ನ ಪ್ರಯತ್ನವನ್ನು ವಿಧವಿಧವಾಗಿ ಶ್ಲಾಘಿಸಿ ವಿಮರ್ಶಿಸಿ ಉಪಕಾರಮಾಡಿವೆ. ಈ ಉಪಕಾರಗಳಿಗಾಗಿ ನಾನು ಎಂದೆಂದಿಗೂ ಕೃತಜ್ಞನಾಗಿರುವುದು ನನ್ನ ಅಗತ್ಯ ವಾದ ಮತ್ತು ಹಿತಕರವಾದ ಕರ್ತವ್ಯವಾಗಿದೆ. ಹೀಗೆ ಲಭಿಸಿರುವ ಪ್ರೋತ್ಸಾಹ ದಿಂದ ಕನ್ನಡ ಸಾಹಿತ್ಯ ಸೇವೆಗೆ ನನ್ನಲ್ಲಿ ಇಮ್ಮಡಿಯಾದ ಉತ್ಸಾಹವುಂಟಾ ಗಿದೆಯೆಂಬುದನ್ನು ಸೂಚಿಸಬೇಕಾದ ಅಗತ್ಯವೇ ಇಲ್ಲ.

ಬೆಂಗಳೂರು
೨೨-೧೦-೧೯೪೧

**ಸಿ. ಕೆ. ವೆಂಕಟರಾಮಯ್ಯ**

# ಮೂರನೆಯ ಮುದ್ರಣದ ಪೀಠಿಕೆ

ಈ ಪುಸ್ತಕವನ್ನು ಮೂರನೆಯ ಸಾರಿ ಮುದ್ರಿಸುವ ಅವಕಾಶವು ಲಭಿಸಿದುದಕ್ಕಾಗಿ ನಾನು ಹರ್ಷಿಸುತ್ತೇನೆ. ಮೈಸೂರು ವಿಶ್ವವಿದ್ಯಾನಿಲಯದವರು ಇದನ್ನು ಇಂಟರ್ಮೀಡಿಯೆಟ್ ಪರೀಕ್ಷೆಗೆ ಪಠ್ಯ ಪುಸ್ತಕವಾಗಿ ಗೊತ್ತು ಮಾಡಿರುವುದಕ್ಕಾಗಿ ನಾನು ಕೃತಜ್ಞತೆಯಿಂದ ವಂದನೆಗಳನ್ನು ಸಲ್ಲಿಸುತ್ತೇನೆ. "ಮೋದಿ ಪವರ್ ಪ್ರೆಸ್" ಮುದ್ರಣಾಲಯದವರು ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟುದಕ್ಕಾಗಿ ಅವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ.

ಬೆಂಗಳೂರು
೨೦–೧೧–೧೯೫೨.

**ಸಿ. ಕೆ. ವೆಂಕಟರಾಮಯ್ಯ**

# ವಿಮರ್ಶೆಗಳಲ್ಲಿ ಕೆಲವು

........"ಮಂಡೋದರಿ" ಯು ಒಂದು ಉತ್ತಮವಾದ ರುದ್ರ ನಾಟಕ ವೆಂದು ಹೇಳಬಹುದು. 'ಟ್ರ್ಯಾಜಡಿ' ಗೆ ಬೇಕಾದ ಎಲ್ಲ ಅಲಂಕಾರಗಳಿಂದ ಇದು ಭೂಷಿತವಾಗಿದೆ ........ ಅನಂತವಾದ ರಾಮಾಯಣವನ್ನು ೧೨ ದೃಶ್ಯ ಗಳಲ್ಲಿಯೇ ಆರಳಿಸುವ ಪ್ರಸಂಗವು ಬಂದೊದಗಿದ್ದರಿಂದ ಇಲ್ಲಿಯ ಲೇಖಕರ ಬಿಗುವೂ, ಕಥಾ ವೇಗವೂ ಆಶ್ಚರ್ಯಕಾರಕವಾಗಿವೆ. ಅನಾವಶ್ಯಕವಾದ ಒಂದು ಮಾತಾದರೂ ಈ ನಾಟಕದಲ್ಲಿದ್ದಂತೆ ತೋರುವುದಿಲ್ಲ. ರಾವಣ, ಮಂಡೋದರಿ—ಇವರೇ ನಾಯಕ-ನಾಯಕಿಯರು. ಆಮೇಲೆ ಸೀತಾ ಮಾತೆ, ವಿಭೀಷಣ ಮುಂತಾದವರು. ರಾವಣ-ಸೀತೆಯರ ನಡುವೆ ಮಂಡೋ ದರಿಯ ಮೂರ್ತಿಯು ನಯನ ಮನೋಹರವಾಗಿ ಕಂಗೊಳಿಸುತ್ತಿದೆ.

ಆಧುನಿಕ ಪೌರಾಣಿಕ ನಾಟಕಗಳಲ್ಲಿ ಇನ್ನೊಂದು ವೈಶಿಷ್ಟ್ಯವನ್ನು ಕಾಣಬಹುದು. ಅದಾವುದೆಂದರೆ ಇಂದಿನ ವಿಚಾರಕ್ಕೆ ಸರಿಯಾಗಿ ಹಿಂದಿನ ಪಾತ್ರಗಳ ಸ್ವಭಾವವನ್ನು ಹೊಂದಿಸಿಕೊಳ್ಳುವುದು ; ಅಂದರೆ ಹಳೆಯ ಕಥೆ ಗಳಲ್ಲಿ ಹೊಸತಾದ ಅರ್ಥವನ್ನು ಕಂಡುಕೊಳ್ಳುವುದು; ಹೀಗಾಗಿ ಹಿಂದಿನ ಅಮಾನುಷ ವ್ಯಕ್ತಿಗಳಿಗೆಲ್ಲ ನಾಟಕಕಾರರು ಮಾನವೀಯತೆಯನ್ನು(Humani-sation) ಇತ್ತಿದ್ದಾರೆ. ಇಲ್ಲವೆ ತಮ್ಮ ಎದೆವುಗುವ ಭಾವಗಳಿಗೆ ಸರಿ ಹೋಗುವಂತೆ ಆ ಕಥೆಗಳನ್ನು ಬದಲಿಸಿಕೊಂಡಿದ್ದಾರೆ. ಇದನ್ನು ಗದಾಯುದ್ಧ, ಸೊಹ್ರಾಬ್-ರುಸ್ತುಂ ಮುಂತಾದುವುಗಳಲ್ಲಿ ಕಾಣಬಹುದು.

'ಮಂಡೋದರಿ' ಯ 'ಅವತಾರ' ವನ್ನು ವರ್ಣಿಸುವ ಕಾರ್ಯ ವನ್ನು ಕೈಕೊಂಡಿದ್ದ ಶ್ರೀ|| ವೆಂಕಟರಾಮಯ್ಯನವರು ರಾವಣನ ರಾಕ್ಷಸೀ ವೃತ್ತಿಯನ್ನು ಕಿತ್ತೊಗೆದು ಆ ಪತಿವ್ರತೆಗೆ ತಕ್ಕ ಪತಿಯನ್ನಾಗಿ ಮಾಡಿದ್ದಾರೆ. ರಾವಣನು ಈಗ ನಿಶಾಚರನಲ್ಲ. ಆದರೆ ಚಂದ್ರನಂತೆ ಒಂದೇ ಒಂದು ಕಲಂಕದಿಂದ ಕಲುಷಿತನಾದ ಮಾನವನು. ಎಲ್ಲವೂ ಉಜ್ವಲವಾಗಿ, ಸ್ವಯಂ ಪ್ರೇರಿತವಾಗಿ ಹರಿದುಬಂದಿದೆ. ಎರಡನೆಯ ಅಂಕದ ಮೂರನೆಯ ದೃಶ್ಯವೂ, ಮೂರನೆಯ ಅಂಕದ ಒಂದನೆಯ ದೃಶ್ಯವೂ ಅತ್ಯದ್ಭುತವಾಗಿವೆ. ಕೊನೆಯ ಪ್ರವೇಶವನ್ನು ಓದುವಾಗ ಹೃದಯದಲ್ಲಿ ತಳಮಳವಾಗುವುದು. "ಧರ್ಮ....

ನಾನು ನಂಬಲಿಲ್ಲ. ನೀನು ನಂಬು........" ಎಂಬ ರಾವಣನ ಮರಣ ವಾಕ್ಯವನ್ನು ಕನ್ನಡಿಗರು ಸಹಜವಾಗಿ ಮರೆಯಲಾರರು.

**—ಜಯಕರ್ನಾಟಕ (ಸಂಪುಟ ೧೦, ಸಂಚಿಕೆ ೨).**

---

"ಮಂಡೋದರಿ" ಯು ಮೂರಂಕಗಳ ನಾಟಕ........ಈ ಕಥೆಯು ಪುರಾಣಪ್ರಸಿದ್ಧರಾದ ವ್ಯಕ್ತಿಗಳಿಗೆ ಸಂಬಂಧಿಸಿದ್ದರೂ ಯಾವ ಪುರಾಣದಲ್ಲಿಯೂ ಇಲ್ಲದ ಕಥೆ. ರಾವಣನು ಇಂದ್ರನನ್ನು ಗೆದ್ದುದು, ಮಂಡೋದರಿಯನ್ನು ಮದುವೆಯಾಗಿದ್ದುದು, ಸೀತಾಪಹರಣ ಮಾಡಿದುದು, ರಾಮನೊಡನೆ ಯುದ್ಧಮಾಡಿದುದು ಎಂಬ ಪ್ರಸಿದ್ಧ ಸಂಗತಿಗಳನ್ನು ನಾವು ರಾಮಾಯಣದಲ್ಲಿ ನೋಡಿದ್ದೇವೆ. ಆದರೆ, ಅಲ್ಲಿ ರಾಮನ ಕಥೆಯನ್ನು ಹೇಳುವ ಅವಸರದಲ್ಲಿ ಇತರರ ಕಥೆಯು ಪ್ರಾಸಂಗಿಕವಾಗಿ ಬರುವುದೇ ಹೊರತು, ಅದೇ ಮುಖ್ಯ ವಾಗಿರುವುದಿಲ್ಲ. ಈ ನಾಟಕದಲ್ಲಿ ಹಾಗಲ್ಲ: ಈ ನಾಟಕದ ಮುಖ್ಯವಸ್ತು ಮಂಡೋದರಿಯ ಮಹಿಮೆ. ಮಂಡೋದರಿಯ ಚರಿತ್ರೆಯೆಂಬ ವಜ್ರಕ್ಕೆ ಸೀತಾರಾಮರ ಕಥೆಯೆಂಬ ವರ್ತಿಯನ್ನು ಕೊಟ್ಟು ಬರೆದಿರುವುದು ಈ ನಾಟಕ. ಇದರಲ್ಲಿ ರಾವಣನು ನಾಯಕನಂತೆ ಕಂಡುಬಂದರೂ ನಾಯಕಿಯ ಗಂಡನೇ ಆದರೂ ಅಪ್ರಧಾನನೇ! ಪ್ರಧಾನ ಪಾತ್ರವು ಮಂಡೋದರಿ.................. ರಾವಣನ 'ನೀನು ಜಯವನ್ನು ಕೋರುತ್ತಲೇ ಇರು. ನಾನು ಜಯವನ್ನು ಪಡೆದು ಹಿಗ್ಗುತ್ತಲೇ ಇರುವೆನು', 'ನೀನು ನನ್ನ ಸುಮ್ಮಾನದ ಮುದ್ದುಗಿಳಿ', 'ವಾಣಿಯಾಡುವ ನನ್ನ ವೀಣೆಯೆ' ಮೊದಲಾದ ಮಾತುಗಳಿಂದಲೂ, ಮಂಡೋದರಿಯ 'ಸಂತೋಷವು ನಿನಗೊಬ್ಬನಿಗೇ ಅಲ್ಲ', 'ಪ್ರಿಯನೆದುರಿಗೆ ನಿಂತಾಗ ತನಗೂ ಪ್ರತ್ಯೇಕವಾದ ದೇಹವೊಂದಿದೆಯೆಂಬ ಪ್ರಜ್ಞೆಯುಳ್ಳವಳು ಅದನ್ನು ಹೇಳಲು ಸಮರ್ಥಳು', 'ಸ್ವರ್ಗಲೋಕದವರಿಗಿಂತಲೂ ಆರ್ಯ ಪುತ್ರನು ಅಗ್ಗಳಿಯನೆಂದು ಹೊಗಳಿ ಮುತ್ತಿನಾರತಿಯ ಕಾಣಿಕೆಯನ್ನೊಪ್ಪಿಸು ವುದಕ್ಕಾಗಿ'—ಮುಂತಾದ ಮಾತುಗಳಿಂದಲೂ ಅಭಿವ್ಯಕ್ತವಾಗುವ ರತಿಗೆ, ನಾರದರು ಬಂದು ಕೊಟ್ಟುಹೋಗುವ ಚಕ್ರ ಪ್ರಸಂಗದಿಂದ ಕಸಿಯಾಗಿ ಅದೂ ಧರ್ಮವೀರದ ಕಡೆಗೆ ಹೊರಳುತ್ತದೆ. ಮಂಡೋದರಿಯು ಪ್ರೀತಿಯಿಂದ ಸಮರ್ಪಿಸುವ ಪಚ್ಚೆಯ ಲಿಂಗದಿಂದ ಆ ಧರ್ಮವೀರವು ಪ್ರವೃದ್ಧವಾಗಿ,

ಇಂದ್ರನನ್ನು ಬಿಡಿಸುವ ಮುಂದಿನ ಸಂದರ್ಭದಲ್ಲಿ ಇನ್ನೂ ಬೆಳೆದು ದಾನವೀರ ವಾಗಿ ವಿರಾಜಿಸುತ್ತದೆ. ವ್ಯಭಿಚಾರೀ ಭಾವಗಳನ್ನು ಸ್ಥಾಯಿಭಾವ ಪೋಷಕ ಗಳಾಗುವಂತೆ ವಿನ್ಯಸಿಸಿ, ಬೇರೆ ಬೇರೆ ಸ್ಥಾಯಿಭಾವಗಳನ್ನೂ ಮುಖ್ಯವಾದ ವೀರರಸಕ್ಕೇ ಹೋಗಿ ಪರಿಣಾಮವಾಗುವಂತೆ ಚಿತ್ರಿಸುವ ಇಂತಹ ಸ್ವಾರಸ್ಯ ವನ್ನೇ "ಭೂಯಸ್ತ್ವಾಂ ರಸಾನಾಂ ಬಹುಧಾಃ ಪ್ರಯೋಗಾಃ" ಎಂಬ ಮಾತಿನಿಂದ ಭವಭೂತಿಯು ಹೇಳಿಕೊಂಡಿರುವುದು............

ಇಲ್ಲಿ ಸೀತಾದೇವಿಯಲ್ಲಿ ಒಂದು ವೈಶಿಷ್ಟ್ಯವಿದೆ. ರಾಮಾಯಣವನ್ನು ಅನುಸರಿಸಿದ ಸೃಷ್ಟಿಯಾಗಿದ್ದರೆ ಸೀತೆಯು "ನನ್ನ ಹೃದಯೇಶ್ವರನ ಸೇವಾ ಭಾಗ್ಯವನ್ನು ಮತ್ತೊಮ್ಮೆ ಕರುಣಿಸು" ಎಂಬುದೊಂದೇ ಪ್ರಾರ್ಥನೆಯಲ್ಲಿ ಮುಗಿಸುತ್ತಿದ್ದಳು. ಈಗ ಹಾಗಿಲ್ಲ! ಈಗ ಈ ಸೀತೆಯು ಪತಿವ್ರತೆಯು, ಪತಿಪರಾಯಣೆಯು, ಮಾತ್ರವಲ್ಲ, ತಾನೂ ಅಷ್ಟು ಸ್ವಾತಂತ್ರ್ಯವನ್ನು ಉಳಿಸಿ ಕೊಂಡಿರುವ ವ್ಯಕ್ತಿ; ಛಾಯಾನುವರ್ತಿನಿಯಲ್ಲ; ಅರ್ಧಾಂಗಿಯೆಂದು ತಿಳಿದಿರುವ ಒಂದು ವ್ಯಕ್ತಿ. ತನಗೂ ಪ್ರತ್ಯೇಕವಾದ ಅಸ್ತಿತ್ವವಿದೆಯೆಂದು ನಂಬಿರುವವಳು. ಅದರಿಂದಲೇ 'ನಿರಂತರವೂ ನಿನ್ನ ಆರಾಧನೆಯಲ್ಲಿ ಮಗ್ನ ಳಾಗಿರುವಂತೆ ನನಗೆ ಮನಸ್ಸನ್ನು ಕೊಡು' ಎಂದು ಭದ್ರಕಾಳಿಯನ್ನು ಪ್ರಾರ್ಥಿಸುತ್ತಾಳೆ. ....ಈ ನಾಟಕದಲ್ಲಿ ಒಂದೊಂದು ದೃಶ್ಯದಲ್ಲಿಯೂ ಮಾತು ಕಥೆಗಳು ಚೆನ್ನಾಗಿವೆ. ಆದರೂ ಮಂತ್ರಾಗಾರ ದೃಶ್ಯವು ಈ ನಾಟಕದಲ್ಲಿ ತುಟ್ಟತುದಿಗೇರಿದೆ. ಅದರಲ್ಲಿಯೂ ಪೂರ್ವಾರ್ಧದಲ್ಲಿರುವ ರಾವಣ ಮಂಡೋ ದರಿಯರ ಸಂಭಾಷಣವು ಅದ್ವಿತೀಯವಾಗಿದೆ. ದೈವಚೋದಿತನಾಗಿ ವಿನಾಶದ ಹಾದಿಯಲ್ಲಿ ಹರಿದೋಡುತ್ತಿರುವ ಅತುಲಭುಜಬಲ ಪರಾಕ್ರಮಿಯಾದ ರಾವಣ. ಅವನನ್ನು ಧರ್ಮದ ಹಾದಿಗೆಳೆದು ಉದ್ಧರಿಸಬೇಕೆಂದು ಅಪ್ರಿಯ ವಾದರೂ ಹಿತವಾದ ತೀಕ್ಷ್ಣೋಕ್ತಿಗಳನ್ನು ನಿರ್ದಾಕ್ಷಿಣ್ಯವಾಗಿ ನುಡಿಯು ತ್ತಿರುವ ಅವನ ಮೋಹದ ಮಡದಿ ಮಂಡೋದರಿ........ಎಂತಹ ಅದ್ಭುತ ದೃಶ್ಯವಿದು! "ಭಾವೋ ಭಾವಂ ನುದತಿ ರಾಗ ಬಂಧಸ್ಸಏವ!" ಎಂದು ಹಾಡಿದ ಕವಿಸಂತನಲ್ಲವೇ ವಿಮರ್ಶಕನಾಗಿ ಈ ದೃಶ್ಯವನ್ನು ವಿಶದಪಡಿಸಬೇಕು! ಕೆಲವು ವೇಳೆ ದಿವ್ಯ ಗಂಗೆಯು ಭಗೀರಥ ಪ್ರಯತ್ನವಿಲ್ಲದೆಯೇ ಭೂಮಿಗಿಳಿಯು ವುದುಂಟೋ ಏನೋ! ಇರಬೇಕು. ಇಲ್ಲದಿದ್ದರೆ ಈ ದೃಶ್ಯವು ನಮಗೆ

ಲಭಿಸುತ್ತಿರಲಿಲ್ಲ.........'ಮಂಡೋದರಿ'ಯು ಹೀಗೆ ನಮ್ಮ ಸಂಸ್ಕೃತಿಯ ಸ್ವರೂಪವನ್ನು ಹೊಳಪಿಕ್ಕಿ ತೋರುವ ನಾಟಕ. ಹಿಂದಿನ ಧರ್ಮಶರಣರ ಎದೆಯ ಕೆಚ್ಚನ್ನು, ಸರ್ವವನ್ನೂ ಧರ್ಮಕ್ಕೆಂದು ಸಮರ್ಪಿಸಿದರೇಯೇ ಜೀವನದಲ್ಲಿ ಶ್ರೇಯಸ್ಸೆಂಬ ಉಪದೇಶವನ್ನು, ಪ್ರೇಯಕ್ಕಾಗಿ ಶ್ರೇಯವು ಬೇಡೆಂದವನ ಬಾಳು ಟೊಳ್ಳೆಂಬುದನ್ನು ಮನಗಂಡಿದ್ದ ಸಮಾಜದ ಚಿತ್ರವಿದು. ನಾಟಕವು ಕಾವ್ಯ. ಕಾವ್ಯವು ಕವಿಯ ಧೋರಣೆಗೆ ಸಿಕ್ಕಿ ನಿರ್ಮಿತವಾಗುವ ಗ್ರಂಥ, ಶಾಸ್ತ್ರವಲ್ಲ ಎಂಬ ಮಾತು ನೆನಪಾದೊಡನೆಯೇ 'ಮಂಡೋದರಿ'ಯು "ಪಾಪಿಯಾದ ರಾವಣನ ಕಥೆ" ಎಂಬ ಸಂಪ್ರದಾಯ ಶರಣರ ಆಕ್ಷೇಪಣೆಯು ದೂರವಾಗುವುದು. ಆಗ "ಅಹಲ್ಯಾ ದ್ರೌಪದೀ ತಾರಾ । ತಾರಾ ಮಂಡೋದರೀ ತಥಾ॥ ಪಂಚ ಕನ್ಯಾ ಸ್ಮರೇನ್ನಿತ್ಯಂ। ಮಹಾಪಾತಕ ನಾಶನಂ॥" ಎಂಬ ಶ್ಲೋಕವು ನೆನಪಾಗಿ ಮಂಡೋದರಿಯಂತಹ ಮಹಾಪತಿವ್ರತೆಯ ಕಥೆಯೆಂದಾದರೂ ಎಲ್ಲರ ಮನಸ್ಸಿಗೂ ಹಿಡಿಯುವುದು....................

'ಮಂಡೋದರಿ'ಯು ಹಿಂದಿನ ನಾಟಕ ಶಾಸ್ತ್ರವನ್ನೂ ಅನುಸರಿಸಿದೆ ಎಂಬುದನ್ನು ಸ್ವಲ್ಪವಾಗಿ ಸೂಚಿಸಿದ್ದೇವೆ. ಹಾಗೆಯೇ ಇಂದಿನ ಕಾಲದ ಹೆಂಗಸಿನ ಪ್ರತಿಭಟಿಸುವ ಹೃದಯವೂ ಮಂಡೋದರಿಯಲ್ಲಿದೆ ಎಂಬುದನ್ನು ಇನ್ನೂ ಒಮ್ಮೆ ಸೂಚಿಸುತ್ತೇವೆ. ಪತಿವ್ರತೆಯರೆಂದರೆ ಗಂಡನ ಕೈಯ ಗಾಣದೆತ್ತಲ್ಲ, ಗಂಡನ ಸಂಸಾರವನ್ನು ನಿರ್ವಹಿಸುವ ಮಂತ್ರಿ ಎಂಬ ಅಂದಿನ ಅಭಿಪ್ರಾಯವು ಮತ್ತೆ ಸುದೈವದಿಂದ ಮೂಡಿದೆ. ಅದನ್ನು ಸಲಕ್ಷಣವಾಗಿ ಚಿತ್ರಿಸುವ "ಮಂಡೋದರಿ" ನಾಟಕವು, ಸಂಸ್ಕೃತಿಯ ತಿರುಳರಿತ ಅಂದಿನವರು ಇಂದಿನವರು ಎಲ್ಲರಿಗೂ ಮಾನ್ಯವಾಗದಿರುವುದೆಂತು?

**—ರಂಗಭೂಮಿ (ಸಂಪುಟ ೭, ಸಂಚಿಕೆ ೧೨).**

---

ಇದೊಂದು ಮೂರು ಅಂಕಗಳ ವಿಷಾದಾಂತ ಗದ್ಯನಾಟಕ. ನಾಟಕ ಕರ್ತೃಗಳು ಕರ್ಣಾಟಕ ಸಾಹಿತ್ಯ ಪ್ರಪಂಚಕ್ಕೇನೂ ಹೊಸಬರಲ್ಲ. ಅವರು ಸುಪ್ರಸಿದ್ಧ ವಾಗ್ಮಿಗಳು. ನುರಿತ ಸಾಹಿತ್ಯ ಕಲಾಭಿಮಾನಿಗಳು. ಸಂಸ್ಕೃತ, ಕರ್ಣಾಟಕ, ಆಂಗ್ಲಭಾಷೆಗಳಲ್ಲಿ ಚೆನ್ನಾಗಿ ಪರಿಶ್ರಮವುಳ್ಳವರು. ಶ್ರೀ॥ ವೆಂಕಟರಾಮಯ್ಯನವರು ಕಾಳಿದಾಸ, ಭಾಸಾದಿಗಳ ಕಲೋಪಾಸನೆಯ ದಿವ್ಯಾನಂದಲಹರಿಯನ್ನು ತಮ್ಮ ಅಪ್ರತಿಮವಾದ ವಾಗ್ಝರಿಯಿಂದ ನಮ್ಮಂತಹ

ಪಾಮರರಿಗೆ ಮನವರಿಕೆ ಮಾಡಿಕೊಡುವಾಗ ಅವರಲ್ಲಿ ಸ್ಫುಟವಾಗುವ ಸ್ಫೂರ್ತಿಯನ್ನು ಕಂಡು ಕೇಳಿ ಆನಂದಿಸದ ಕನ್ನಡಿಗರಾರಿರುವರು ! ಕಲೆಯ ಒಳತತ್ತ್ವವನ್ನರಿತು ರಂಗಭೂಮಿಯ ಪರಿಸ್ಥಿತಿಯನ್ನು ಮನವರಿಕೆ ಮಾಡಿಕೊಂಡು ಸಾಹಿತ್ಯ ಸೇವೆ ಕಲಾದೇವಿಯ ಸೇವೆ ಮಾಡುತ್ತಲಿರುವ ದೇಶಾಭಿಮಾನಿಗಳಲ್ಲೊಬ್ಬರು ಇವರು ! ಇಂತಹವರು ಈ ನಾಟಕದ ಕರ್ತೃಗಳೆಂದ ಮೇಲೆ—ಅದು ಮಾನ್ಯವಾದ ಕಲಾಸೃಷ್ಟಿಯೆಂದೆನ್ನಿಸಿಕೊಳ್ಳದಿರದು !

ಗ್ರೀಕ್ ವಿಷಾದಾಂತ ನಾಟಕ ಸಾಹಿತ್ಯದಲ್ಲಿ ಹೊಸ ಹಾದಿಯನ್ನು ಹಿಡಿದುಹೋಗಿರುವ, ವ್ಯಕ್ತಿಸ್ವಾತಂತ್ರ್ಯವಾದಿಯೂ ಕ್ರಾಂತಿಕಾರನೂ ಆದ 'ಯೂರಿಪಿಡೀಸ'ನ ಗ್ರೀಕ್ ಜನತೆಯ ಸಮಾಜಪದ್ಧತಿಯಲ್ಲಿ ಸ್ತ್ರೀಯರಿಗೆ ವ್ಯಕ್ತಿ ಸ್ವಾತಂತ್ರ್ಯವಾಗಲೀ, ಒಂದು ಗೌರವಸ್ಥಾನವಾಗಲೀ ಅಸ್ತಿರಲಿಲ್ಲ. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಸಮಾಜ ಪರಿಷ್ಕರಣಕ್ಕಾಗಿ ದೇಶೋದ್ಧಾರಕ್ಕಾಗಿ ಶ್ರಮಿಸಿ ಆ ಭಾವಗಳನ್ನು ತನ್ನ ಕಲಾ ನೈಪುಣ್ಯತೆಯೊಂದಿಗೆ ಸೇರಿಸಿ ನಾಟಕ ಸಾಹಿತ್ಯದಲ್ಲಿ ಪ್ರಯೋಗಮಾಡಿ ಗ್ರೀಕ್ ಸಮಾಜದಲ್ಲಿ ಕ್ರಾಂತಿಯ ಕಿಚ್ಚನ್ನೆಬ್ಬಿಸಿದವನೆಂದರೆ 'ಯೂರಿಪಿಡೀಸ'ನು! ಇದೇ ರೀತಿಯ ಭಾವನೆಗಳು, ಆಶಯಗಳು, ಆದರ್ಶಗಳು, 'ಮಂಡೋದರಿ' ರೂಪಕದಲ್ಲಿ ಶ್ರೀಯುತರವರಿಂದ ಬಹಳ ಚೆನ್ನಾಗಿ ಚಿತ್ರಿಸಲ್ಪಟ್ಟಿವೆ! ಮಂಡೋದರಿಯ ಪಾತ್ರರಚನೆಯನ್ನು ನೋಡಿದಲ್ಲಿ ಈಗಿನ ಸಮಾಜದ ನಿತ್ಯನೈಮಿತ್ತಿಕ ನಡೆವಳಿಕೆಯಲ್ಲಿ ಸಾಂಸ್ಕೃತಿಕ ಪುನರುಜ್ಜೀವನದ ಮಹತ್ಕಾರ್ಯದಲ್ಲಿ ತೊಡಗಿರುವ ತರುಣ ಭಾರತದ ಪ್ರಚಲಿತ ಪ್ರಪಂಚದಲ್ಲಿ ಸ್ತ್ರೀತ್ವಕ್ಕೆ ಎಷ್ಟರಮಟ್ಟಿನ ಗೌರವವನ್ನೂ ಉನ್ನತ ಸ್ಥಾನವನ್ನೂ ಕೊಡಬೇಕೆಂಬುದು ವ್ಯಕ್ತವಾಗುವುದು. ಎರಡನೆಯ ಅಂಕದ ಐದನೆಯ ದೃಶ್ಯದಲ್ಲಿ ರಾವಣನು ಆವೇಶಭರದಲ್ಲಿ ಮಂಡೋದರಿಯನ್ನು ಕುರಿತು—'ಆದಿಶಕ್ತಿ, ಒಲಿದು ಬಂದೆಯಾ ಲೋಕಮಾತೆ' ಎಂದು ಆಡುವ ಮಾತನ್ನು ನಾಟಕಕಾರರು ಈಗಿನ ಸ್ತ್ರೀತ್ವಕ್ಕೇ ಅನ್ವಯಿಸಿ ಹೇಳಿರುವಂತೆ ಭಾಸವಾಗುತ್ತದೆ. ಅಂತೆಯೇ ಅವರ ಅತುಲ ದೇಶಾಭಿಮಾನವು—ನಾಟಕದಲ್ಲಿ ಎಲ್ಲೆಲ್ಲಿ ಸಮಯ ಸನ್ನಿವೇಶಗಳು ದೊರಕುವುವೋ ಅಲ್ಲೆಲ್ಲ ತಾನೇ ತಾನಾಗಿ ಹೊರಹೊಮ್ಮುವುದು. ಈ ಕೆಳಗಣ ವೀರವಾಣಿಯನ್ನು ಕೇಳಿ ಯಾರುತಾನೆ ಮಾತೃಭೂಮಿಗಾಗಿ ತಮ್ಮ ರಕ್ತವನ್ನು ಧಾರೆ ಎರೆದುಕೊಡಲು ಸಿದ್ಧರಾಗುವುದಿಲ್ಲ ! ಕವಿಯ ಕಲಾಚಾತುರ್ಯವನ್ನು ನೋಡಬೇಕಾದಲ್ಲಿ—

ಆ ವೀರವಾಕ್ಯಗಳನ್ನು ಆ ಅಭಿಮಾನಪೂರಿತವಾದ ದೇಶಭಕ್ತಿಯ ಮಂತ್ರೋಚ್ಚಾರಣೆಯನ್ನು ಯಾರ ಬಾಯಲ್ಲಿ ಮಾಡಿಸುತ್ತಾನೆಂದು ನೋಡಿದರೆ ತಿಳಿದೀತು!

**ಮಂಡೋದರಿ—** ' ವಿಭೀಷಣ ! ನನ್ನ ಅಂತರಾತ್ಮವು ಲಂಕೆಯನ್ನು ಬಿಟ್ಟು ಹೋಗಲಾರದು. ನನ್ನ ದೇಹವು ಬಿದ್ದುಹೋದರೂ, ನನ್ನ ಆತ್ಮವು ಪತಿ ಪುತ್ರರ ಆತ್ಮಗಳೊಡನೆ ಲಂಕಾ ರಾಜ್ಯದ ಎಲ್ಲೆಡೆಗಳನ್ನೂ ವ್ಯಾಪಿಸುವಂತೆ ಸರ್ವ ಮಂಗಳೆಯು ಅನುಗ್ರಹಿಸಬಾರದೆ? ಸಮಸ್ತ ವಿಧಗಳಲ್ಲೂ ನೀನು ಲಂಕಾಮಾತೆಯನ್ನು ಸೇವಿಸು ".......“ ಜನ್ಮಜನ್ಮಾಂತರಗಳಲ್ಲೂ ಆರ್ಯಪುತ್ರನೇ ನನಗೆ ಪತಿಯಾಗಲಿ ! ಪುಣ್ಯವಿದ್ದರೆ ಲಂಕೆಯಲ್ಲೇ ನಮಗೆ ಜನ್ಮವಾಗಲಿ ! ”

ಮಾತೃಭೂಮಿಯ ಮೇಲಣ ಉತ್ಕಟಾಭಿಮಾನದ ಈ ದಿವ್ಯವಾಕ್ಯಗಳನ್ನು ಓರ್ವ ಸ್ತ್ರೀಯ ಬಾಯಲ್ಲಿ ಹೇಳಿಸಿರುವುದನ್ನು ನೋಡಿದಲ್ಲಿ, ' ನವೀನ ಭಾರತದ ಕನ್ಯಾಮಣಿಗಳ ಕೈಯಲ್ಲಿಯೇ ಆರ್ಯಾವರ್ತದ ಆಗುಹೋಗುಗಳು ಸಾಫಲ್ಯಗೊಳ್ಳಬೇಕೆಂದು ಕವಿಯ ಆಶಯವಿರಬಹುದೆ ' ಎಂದೆನ್ನಿಸುವುದು ! ಉಜ್ವಲ ಸ್ವದೇಶಾಭಿಮಾನ ಮತ್ತು ಆದರ್ಶಭಾವೀ ಸಮಾಜದಲ್ಲಿ ಸ್ತ್ರೀವ್ಯಕ್ತಿತ್ವದ ವಿಶ್ವವ್ಯಾಪಕಶಕ್ತಿ ಇವೆರಡು—ಅಂಶಗಳನ್ನು ಚಿತ್ರಿಸಿರುವುದು ಕಲಾದೃಷ್ಟಿಯಿಂದ ಮಾನ್ಯವಾಗಿರುವುದಲ್ಲದೆ, ' ಗ್ರೀಕ್ ' ವಿಷಾದಾಂತರೂಪಕ ಪ್ರಪಂಚದ ಕ್ರಾಂತಿಕಾರನಾದ ಯೂರಿಪಿಡೀಸನ ಆದರ್ಶವನ್ನು ಹೋಲುವುದಲ್ಲವೆ ? ಈ ಉಚ್ಚತರ ಧ್ಯೇಯಗಳನ್ನು ಸಾಧಿಸಿ, ಸಾಹಿತ್ಯದ ಮಧುರತರ ರಸಾಸ್ವಾದನೆಯನ್ನು ಮಾಡಿ ಸರ್ವರೂ ದಿವ್ಯಾನಂದಲಹರಿಯಲ್ಲಿ ಓಲಾಡುವಂತೆ ಮಾಡಿದ ಶ್ರೀ|| ವೆಂಕಟರಾಮಯ್ಯನವರಿಗೆ ನಾವೆಷ್ಟು ಋಣಿಗಳಾಗಿರಬೇಕು !

ಇನ್ನು, ನಾಟಕದಲ್ಲಿನ ವಸ್ತುರಚನಾ ವಿಷಯ. ಸುಪ್ರಸಿದ್ಧವಾದ ರಾಮಾಯಣ ಮಹಾಕಾವ್ಯದ ಯುದ್ಧಕಾಂಡದಲ್ಲಿನ ಮುಖ್ಯ ಸನ್ನಿವೇಶಗಳನ್ನು ತೆಗೆದುಕೊಂಡು—' ಮಂಡೋದರಿ ' ದೇವಿಯನ್ನು ಮುಖ್ಯ ನಾಯಿಕೆಯನ್ನಾಗಿ ಮಾಡಿ — ತಮ್ಮ ಪ್ರತಿಭೆಯೊಂದಿಗೆ ಸ್ವಕಲ್ಪಿತವಾದ ಸನ್ನಿವೇಶಗಳನ್ನು ಜೋಡಿಸಿ ನಾಟಕದ ವಸ್ತುವನ್ನು ತಮ್ಮ ಕಲಾಚಾತುರ್ಯದಿಂದ ಸಾಹಿತ್ಯ ಸೌಂದರ್ಯದ ಖನಿಯನ್ನಾಗಿ ಸೃಷ್ಟಿಸಿರುವರು ! ರಾವಣನಿಗೆ ಹತ್ತು ತಲೆಗಳೂ ಇಪ್ಪತ್ತು ಕೈಗಳೂ ಶಿವಪ್ರಸಾದದಿಂದ ಲಭಿಸಿದಂಶವನ್ನು — ' ಆನಂದ ರಾಮಾಯಣ'ದಿಂದ ತೆಗೆದು ಇಲ್ಲಿನ ಕಥಾಸರಣಿಗೆ ಸೇರಿಸಿರುವುದು, ರಾವಣನ ಅಗ್ಗಳಿಕೆಯನ್ನೂ ಪರಶಿವನಲ್ಲಿ ಅವನ ಅಚಲ ಭಕ್ತಿಯನ್ನೂ ವ್ಯಕ್ತಪಡಿಸುವು

ದಕ್ಕಾಗಿಯೇ ಎಂದು ತೋರುವುದು. ಕೊನೆಯ ಅಂಕದ ಕೊನೆಯ ದೃಶ್ಯವಂತೂ ಕೇವಲ ಸ್ವಕಲ್ಪಿತವಾದುದಾದರೂ ಹೃದಯವನ್ನು ಕಲಕಿ ಕರುಳನ್ನು ಕೀಳುವಂತಿರುವ ಕರುಣಾರಸ ಪ್ರತಿಪಾದನೆಯಲ್ಲಿ ಶ್ರೇಷ್ಠತರ ಕೈವಾಡವನ್ನು ತೋರಿಸುವುದಕ್ಕಾಗಿರುವುದು. ಸಾಂಪ್ರದಾಯಿಕ ರೀತ್ಯಾ—ಸೀತೆ, ರಾವಣ, ಆಂಜನೇಯ, ಮಂಡೋದರಿ ಇವರೆಲ್ಲರನ್ನೂ ಒಂದೇ ದೃಶ್ಯದಲ್ಲಿ, ರಾವಣನ ಆತ್ಮಶಕ್ತಿಯು ಕಂದಿಹೋಗುವ ಸಮಯದಲ್ಲಿ—ಒಂದಿಗೆ ಸೇರಿಸಿರುವುದು ಅಷ್ಟು ಸಮರ್ಪಕವಾಗಿ ಕಾಣದೆಹೋದರೂ—ಸಾಹಿತ್ಯ ದೃಷ್ಟಿಯಿಂದ, ಕಲಾಸೃಷ್ಟಿಯ ದೃಷ್ಟಿಯಿಂದ ಕವಿಸ್ವಾತಂತ್ರ್ಯ ವ್ಯಾಜದಿಂದ ಮೇಲ್ಕಂಡ ಮಾರ್ಪಾಡು ಅತ್ಯಾವಶ್ಯಕವಾಗಿಯೇ ಕಂಡುಬರುವುದು. ಪುರಾಣರೀತ್ಯಾ ವಂದನೀಯವಲ್ಲದೆ ಹೋದರೂ ಧರ್ಮಾಧರ್ಮಗಳ ವಿಷಯದಲ್ಲಿ ಕವಿಯ ಭಾವನೆಯಲ್ಲಾದ ಒಳತೋಟಿಯು, ಜೀವನಸಾಗರದಲ್ಲಿ ಮಾನವ ಆಶೆಪ್ರತ್ಯಾಶೆಗಳು, ಅರಿಷಡ್ವರ್ಗಗಳು, ರಜೋಗುಣ ಮತ್ತು ತಮೋಗುಣಗಳು ಎಲ್ಲವೂ ಎಷ್ಟರಮಟ್ಟಿನ ಮಾಯಾಮರೀಚಿಕೆಗಳು—ಎಂಬ ವಿಷಾದಮಯ ವಿಚಾರತರ್ಕದಲ್ಲಿ ನೊಂದ ಹೃದಯದಿಂದ ಹೊರಸೂಸುವ ಉದ್ಗಾರ ಒಂದನ್ನು ಚಿತ್ರಿಸುವುದಕ್ಕೆ ಇಂಥ ಸನ್ನಿವೇಶಗಳು ತಾನೆ ಕವಿಗೆ ದೊರಕಬೇಕು! ಈ ಬಗೆಯ ಕವಿ ಸ್ವಾತಂತ್ರ್ಯವನ್ನು ನಾವು ತಡೆಗಟ್ಟಿದಲ್ಲಿ ಸಾಹಿತ್ಯದೇವಿಗೆ ಮಹಾಪರಾಧವನ್ನೆಸಗಿದಂತಾಗುವುದಿಲ್ಲವೆ? ಪ್ರಕೃತದಲ್ಲಿ ನಾವು ಗಮನಿಸಬೇಕಾದುದು—ರಾವಣನು ಯುದ್ಧ ಪರಾಙ್ಮುಖನಾಗಿ ಮೃತ್ಯುಶಯ್ಯೆಯಲ್ಲಿದ್ದಾಗ ಮಂಡೋದರಿಯ ಮಾತು ಹಾಗಿರಲಿ—ಸೀತಾಂಜನೇಯರು ರಾವಣ ಶಿಬಿರದಲ್ಲಿ ರಾವಣನೆದುರಿನಲ್ಲಿದ್ದರೇ ಇಲ್ಲವೇ ಎಂಬ ಪ್ರಶ್ನೆಯನ್ನಲ್ಲ! ಅದು ಅನೃತವಾದರೂ ಜ್ಞಾನೋದಯವಾದಾಗ ರಾವಣನ ನಿಶ್ಚಲಮನಸ್ಸಿನ ಹಂಬಲು, ಮಂಡೋದರಿಯಂತಹ ಲೋಕಮಾನ್ಯಳ ಹೃದಯವೇದನೆ ಮತ್ತು ಧರ್ಮಕರ್ತವ್ಯದ ಅರಿವು ತಪ್ಪಿ ನಡೆದ ಹಸುಳೆಯಲ್ಲಿ ತಾಯಿಯು ತೋರುವ ಕನಿಕರ, ಮಮತೆ, ಕ್ಷಮಾಬುದ್ಧಿಗಳು ಮೂರ್ತೀಭವಿಸಿದಂತಿರುವ ಸೀತಾಮಾತೆಯ ಹೃದಯಮಾರ್ದವ, ತನ್ನ ಅತುಲವಾದ, ಅನಂತವಾದ, ಅಪ್ರತಿಹತವಾದ ವಿಶ್ವಪ್ರೇಮದಲ್ಲಿ ಎಲ್ಲರೂ ಒಂದೇ—ಆ ಅಮೃತವನ್ನಾಸ್ವಾದನೆಮಾಡಿ ದಿವ್ಯಾಮರತ್ವವನ್ನು ಪಡೆಯಲು ನೀಚನೂ ಧಾರ್ಮಿಕನೂ ಎಲ್ಲರೂ ಸಮಭಾಗಿಗಳೇ ಎಂಬ ಧರ್ಮದ ಸಾರವನ್ನು ಬೋಧೆಮಾಡಿದ ಲೀಲಾಮಾನುಷನಾದ ಶ್ರೀರಾಮಚಂದ್ರನ

ಕಾಂತಿಮಯ ಮನಸ್ಸು — ಈ ಎಲ್ಲ ಚಿತ್ರಗಳೂ ಏಕಕಾಲದಲ್ಲಿ ಕವಿಯ ಸೃಷ್ಟಿಯ ಎದುರಿನಲ್ಲಿ ಬಂದು ನಿಂತರೆ, ಅದೇ ಸನ್ನಿವೇಶಗಳನ್ನು ದೇವದತ್ತವಾದ ತನ್ನ ಪ್ರತಿಭೆಯಿಂದ ಸ್ಥಾನಮಾನಗಳ ಔಚಿತ್ಯವನ್ನು ಮೀರದೆ ಏತಕ್ಕೆ ಸೃಷ್ಟಿಸಬಾರದು?

ಮೊದಲನೆಯ ಅಂಕದಲ್ಲಿ ಮೂರು ದೃಶ್ಯಗಳೂ, ಮೂರನೆಯ ಅಂಕದಲ್ಲಿ ಮೂರು ದೃಶ್ಯಗಳೂ ಇದ್ದು, ಎರಡನೆಯ ಅಂಕವು ಸ್ವಲ್ಪ ಲಂಬವಾಗಿ ಆರು ದೃಶ್ಯಗಳನ್ನೊಳಗೊಂಡಿರುವುದು. ಈ ರೂಪಕವು ರಂಗಸ್ಥಳದಮೇಲೆ ಪ್ರಯೋಗ ಮಾಡುವಂತೆ ಬರೆಯಲ್ಪಟ್ಟಿರುವುದರಿಂದ ನಾಟಕ ಪ್ರದರ್ಶನ ಮಾಡುವುದರಲ್ಲಿ ಕಂಡುಬರುವ ಒಂದು ಅನೌಚಿತ್ಯವನ್ನು ಕುರಿತು ಎರಡು ಮಾತುಗಳನ್ನು ಹೇಳಬೇಕಾಗುತ್ತದೆ.

ಎರಡನೆಯ ಅಂಕದ ಐದನೆಯ ದೃಶ್ಯದಲ್ಲಿ ಅಂಗದಾದಿಗಳು ಮಕರಂದೋದ್ಯಾನದಲ್ಲಿ ರಾವಣನ ತಪೋಭಂಗವನ್ನು ಮಾಡುವ ಸನ್ನಿವೇಶವೂ, ತಪೋಬಹಿರ್ಮುಖನಾದ ರಾವಣನು, ವಿಧಿವಿಲಾಸದ ವಿರೋಧಪರ್ಯವಸಾನವನ್ನು ಕುರಿತು, ರೋದಿಸಿ ಉದ್ವೇಗಭರಳಾಗಿ ಮೂರ್ಛಿತಳಾದ ತನ್ನ ಮಡದಿ ಮಂಡೋದರಿಯನ್ನು ಉಪಚರಿಸುವ ಸನ್ನಿವೇಶವೂ — ಚಿತ್ರಿಸಲ್ಪಟ್ಟಿವೆ. ಮುಂದೆ ಆರನೆಯ ದೃಶ್ಯದಲ್ಲಿ ಯುದ್ಧಸನ್ನದ್ಧನಾಗಿ ರಣಾಂಗಣಕ್ಕೆ ಹೊರಟಿರುವ ರಾವಣನು ಮಂಡೋದರಿಯ ಕೊನೆಯ ದರ್ಶನವನ್ನು ಪಡೆದುಹೋಗಲು ಬರುವ ದೃಶ್ಯವು ಚಿತ್ರಿಸಲ್ಪಟ್ಟಿದೆ. ನಾಟಕರಂಗದಮೇಲೆ—ಈ ಎರಡು ದೃಶ್ಯಗಳನ್ನೂ ಒಂದಾದಮೇಲೆ ಒಂದನ್ನು ಹೇಗೆ ತಾನೆ ಪ್ರದರ್ಶಿಸಬೇಕು? * ಕ್ಷಣಕಾಲದ ಹಿಂದೆ—ಮೂರ್ಛಿತಳಾದ ಮಂಡೋದರಿಯು ತೆರೆಯು ಬಿದ್ದ ಮರುಕ್ಷಣವೇ ಮುಂದೆ ರಾವಣನ ಸಂಗಡ ಮಂತ್ರಾಲೋಚನೆಯನ್ನು ನಡೆಯಿಸಲು ಬರುವುದೆಂದರೆ — ಪ್ರೇಕ್ಷಕರು (ವಾಚಕರಲ್ಲ!) ಅದನ್ನು ಹೇಗೆ ನಂಬಲಾದೀತು? ಹಿಂದಿನ ದೃಶ್ಯದಲ್ಲಿ ತಪೋನಿಷ್ಠನಾದ ರಾವಣನ ಉಡುಪೆಂತಿರಬೇಕು — ಯುದ್ಧಸನ್ನದ್ಧನಾಗಿ ಬರುವಲ್ಲಿ — ಆಗಿನ ಉಡುಪೆಂತಿರ

* ಆ ಎರಡು ದೃಶ್ಯಗಳಿಗೂ ಮಧ್ಯದಲ್ಲಿ ಅಂಕದ ತೆರೆಯನ್ನು ಬಿಟ್ಟು ಕೆಲವು ನಿಮಿಷಗಳ ವಿರಾಮವನ್ನು ಪಡೆದು ನಟವರ್ಗದವರು ಯಾವ ಕೊರತೆಯೂ ಯಾವ ತೊಂದರೆಯೂ ಇಲ್ಲದಂತೆ ನಾಟಕವನ್ನು ಅಭಿನಯಿಸಿದ್ದಾರೆ—ಸಿ. ಕೆ. ವೆಂ.

ಬೇಕು—ನಟನು ಒಂದು ದೃಶ್ಯವು ಮುಗಿದು ಮತ್ತೊಂದು ದೃಶ್ಯದಲ್ಲಿ ರಂಗ ಸ್ಥಳದಮೇಲೆ ಬರುವಾಗ ಉಡುಪಿನ ಬದಲಾವಣೆಯನ್ನು ಮಾಡಿಕೊಳ್ಳ ಬೇಕಾದಲ್ಲಿ—ಮಧ್ಯೆ ಸ್ವಲ್ಪ ಕಾಲ ವಿರಾಮವಿರಬೇಕಲ್ಲವೆ? ಇಲ್ಲಿನ ಸ್ಥಿತಿಯಲ್ಲಿ ಹಾಗಿರದೆ—ಮೇಲೆ ಹೇಳಿದ ಎರಡು ದೃಶ್ಯಗಳನ್ನೂ ಒಂದಾದಮೇಲೊಂದನ್ನು ತಂದೊಡ್ಡಿರುವುದು ಅಷ್ಟು ಸಮರ್ಪಕವಾಗಿ ಕಾಣುವುದಿಲ್ಲ. ಉಡುಪಿನ ಮಾತಂತಿರಲಿ—ಹಿಂದಿನ ದೃಶ್ಯದಲ್ಲಿ ನಟರು ಪ್ರದರ್ಶನ ಮಾಡುವ ರಸಾನು ಭವಕ್ಕೆ ತಕ್ಕಂತೆ ಹಾವಭಾವಗಳನ್ನು ಮಾಡಿಕೊಂಡಿದ್ದು ಪ್ರತಿಕ್ಷಣದಲ್ಲಿಯೇ ಬೇರೆ ಸನ್ನಿವೇಶಗಳಿಗೊಪ್ಪಲಿರುವ ರಸಪ್ರದರ್ಶನಮಾಡಲು ಮುಂದಿನ ದೃಶ್ಯದಲ್ಲಿ ಬಿಡುವಿಲ್ಲದೆ ಕೆಲವು ನಿಮಿಷಗಳೊಳಗಾಗಿಯೇ ಸಿದ್ಧರಾಗುವುದು—ಸ್ವಲ್ಪ ದುಸ್ಸಾಧ್ಯವೆಂದೇ ಭಾವಿಸಬೇಕು! ಹಿಂದೆ ಮೂರ್ಛಿತಳಾದವಳು ಮರುಕ್ಷಣದಲ್ಲಿಯೇ ಎಚ್ಚತ್ತು ಬೇರೆ ದೃಶ್ಯದಲ್ಲಿ ರಾವಣನಿಗೆ ಮಂತ್ರಾಲೋಚನೆ ಯಲ್ಲಿ ನೆರವಾಗುವುದನ್ನು ಹೇಗೆ ನಂಬಲು ಸಾಧ್ಯ! ಇದೊಂದು ಅಸಹಜವಾದ ಅಸಮಂಜಸವಾದ ಅನೌಚಿತ್ಯವಲ್ಲವೆ?—(Unrealistic and inconsistent atmosphere.)

ಪುರಾಣೇತಿಹಾಸಗಳ ಆಧಾರದಮೇಲೆ ರಚಿಸಿರುವ ನಾಟಕಗಳಲ್ಲಿ, ಕವಿಯ ಕಲಾಕೌಶಲವನ್ನು ಹೆಚ್ಚಾಗಿ ಕಾಣಬೇಕಾದುದು ಪಾತ್ರರಚನೆಯಲ್ಲಿ. ಈ ನಾಟಕವು ಪ್ರಸಿದ್ಧ ಕಲಾಸೌಂದರ್ಯದ ಖನಿಯಾಗಿ ನಿಲ್ಲಬೇಕಾದುದು ಶ್ರೀ|| ವೆಂಕಟರಾಮಯ್ಯನವರ ಪಾತ್ರರಚನಾ ಕಲಾಕೌಶಲದಲ್ಲಿ. ಸಾಮಾನ್ಯ ವಾಗಿ ಇಂತಹ ನಾಟಕಗಳಲ್ಲಿ ವಸ್ತುರಚನಾಕಾರ್ಯದಲ್ಲಿ ಕವಿಯು ಹೆಚ್ಚು ಸ್ವಾತಂತ್ರ್ಯವನ್ನು ವಹಿಸಲಾಗದು. ಕವಿಯ ಪ್ರತಿಭೆಯನ್ನು - ಅಗ್ಗಳಿಕೆ ಯನ್ನು—ಕಲೋಪಾಸನೆಯನ್ನು, ತಾನು ಸೇರಿದ ಸಮಾಜದ ಆದರ್ಶಗಳ ಪ್ರತಿನಿಧಿಯಾಗಿ ನಿಂತು ತೋರಿಸುತ್ತಿರುವ ವ್ಯಕ್ತಿತ್ವವನ್ನು—ನಾವು ಕಾಣ ಬೇಕಾದುದು ಪಾತ್ರರಚನೆಯೊಂದರಲ್ಲೇ ಎಂದು ನಿರ್ವಿವಾದವಾಗಿ ಹೇಳ ಬಹುದು. ಈ ರುದ್ರರೂಪಕದಲ್ಲಿ ಗಣ್ಯರಾದ, ನಾಯಕ–ನಾಯಕಿಯ ರೆಂದರೆ—ರಾವಣ ಮತ್ತು ಮಂಡೋದರಿ. ರೂಪಕವನ್ನೋದಿ ಗ್ರಂಥವನ್ನು ಒಂದೆಡೆಯಲ್ಲಿಟ್ಟರೂ ನಾಯಕರ ಚಿತ್ರಗಳು ಮತ್ತೆ ಮತ್ತೆ ನಮ್ಮೆದುರಿನಲ್ಲಿ ಬಂದು ನಿಂತು ಲೀಲಾಜಾಲವಾಗಿ ನರ್ತಿಸತೊಡಗುವುವು!

ಹಿಂದೆ ಹೇಳಿದಂತೆ ಈ ರೂಪಕವನ್ನು ಪಾಶ್ಚಾತ್ಯ ರುದ್ರರೂಪಕಗಳ ಪದ್ಧತಿಯನ್ನೇ ಅನುಸರಿಸಿ ಬರೆದಿರುವುದರಿಂದ ಈ ನಾಟಕದ ಮುಖ್ಯ ನಾಯಕನಾದ ರಾವಣನಲ್ಲಿ ರುದ್ರನಾಯಕ (Tragic hero) ನ ಮುಖ್ಯ ಲಕ್ಷಣಗಳೆಲ್ಲವೂ ಪ್ರತಿಬಿಂಬಿತವಾಗಿವೆಯೆಂದು ಹೇಳಬಹುದು. ನಾಟಕದಲ್ಲಿ— "ಮಂಡೋದರಿ" ದೇವಿಯೇ ಮುಖ್ಯ ನಾಯಿಕೆಯಾದರೂ ನಮ್ಮ ಗಣನೆಯಲ್ಲಿ ರಾವಣನ ಪಾತ್ರಕ್ಕೆ ರುದ್ರರೂಪಕ ಲಕ್ಷಣದ ದೃಷ್ಟಿಯಿಂದ ಪ್ರಾಶಸ್ತ್ಯವು ಹೆಚ್ಚು. ಹೀಗಿರುವಲ್ಲಿ ಈ ನಾಟಕಕ್ಕೆ 'ಮಂಡೋದರಿ' ನಾಮಾಂಕಿತವು ಹೇಗೆ ಸಹಜವು" ಎಂದು ಪ್ರಶ್ನೆ ಬರಲವಕಾಶವಿದ್ದರೂ * ಶ್ರೀಯುತರ ಮಂಡೋದರಿ ಪಾತ್ರರಚನಾ ನೈಪುಣ್ಯತೆಯ ಪ್ರತಿಭೆಯ ದೆಸೆಯಿಂದ, ಪ್ರವೃತ್ತಿಮಾರ್ಗದಲ್ಲಿದ್ದರೂ — ನಿವೃತ್ತಿಮಾರ್ಗವನ್ನನುಸರಿಸುತ್ತ ಆದಿಶಕ್ತಿಯಾದ ಸರ್ವಮಂಗಳೆಯಂತಿರುವ ಸ್ತ್ರೀವ್ಯಕ್ತಿಯ ನಿಸರ್ಗ ಚಿತ್ರವೊಂದನ್ನು ಸೃಷ್ಟಿಸಿರುವುದರಿಂದ 'ಮಂಡೋದರಿ' ನಾಮಾಂಕಿತವು ಈ ರೂಪಕಕ್ಕೆ ಸಹಜವೆನಿಸದಿರದು. ಮೇಲ್ಕಂಡ ಪ್ರಶ್ನೆಗೆ ಶ್ರೀಯುತರವರು ರಾವಣನು ಮಂಡೋದರಿಯನ್ನು ಕುರಿತು—'ರಾವಣನ ಪತ್ನಿಯೆಂದು ಮಂಡೋದರಿಗೆ ಮನ್ನಣೆಯು ಸಲ್ಲುತ್ತಿದ್ದ ಕಾಲವು ಎಂದೋ ಕಳೆದುಹೋಯಿತು. ಮಂಡೋದರೀದೇವಿಯ ಪತಿಯೆಂದು ರಾವಣನ ಗೌರವವು ಹೆಚ್ಚುವ ಕಾಲವು ಈಗ ಬಂದಿದೆ' ಎಂದು ಹೇಳುವ ಈ ಮಾತುಗಳಲ್ಲಿಯೇ ಉತ್ತರವನ್ನು ಹೇಳಿಬಿಟ್ಟಿರುವರು! ಪುರಾಣರೀತ್ಯಾ ರಾವಣನು ರಾಕ್ಷಸನಿರಬಹುದು. ದೈವಬ್ರಾಹ್ಮಣ ದ್ರೋಹಿಯಿರಬಹುದು. ಕಾಮುಕ ದೃಷ್ಟಿಯಿಂದ ಸೀತಾಮಾತೆಯನ್ನಪಹರಿಸಿದ ತಸ್ಕರನಿರಬಹುದು. ಆಸುರೀವೃತ್ತಿಯ ಲೋಕಕಂಟಕನಿರಬಹುದು. ಆದರೆ ನಮ್ಮ ದೃಷ್ಟ್ಯಾ ಅಂದರೆ—ರುದ್ರನಾಯಕನ ಪಾತ್ರರಚನಾ ದೃಷ್ಟ್ಯಾ—ರಾವಣನು ಇಂದ್ರಾದಿ ದೇವತೆಗಳನ್ನು ಜಯಿಸಿದ ಮಹಾ ಅಗ್ಗಳಿಯ ವೀರನು; ತನ್ನ ಬಾಹುಬಲದಿಂದಲೂ ನಿರ್ಮಲಭಕ್ತಿ ಸ್ಥಿರ ತಪಸ್ಸುಗಳಿಂದಲೂ ಈಶ್ವರನನ್ನು ಮೆಚ್ಚಿಸಿದ ಮಹಾಮಹಿಮನು, ಲಂಕಾರಾಜ್ಯದ ಪ್ರಿಯತಮ ಸಾರ್ವ

---

* ಅಮರನಾದ ಷೇಕ್ಸ್‌ಪಿಯರ್ ಮಹಾಕವಿಯು ಬರೆದಿರುವ "ಜೂಲಿಯಸ್ ಸೀಸರ್" ನಾಟಕದಲ್ಲಿ ರುದ್ರರೂಪಕ ಲಕ್ಷಣ ದೃಷ್ಟಿಯಿಂದ ಬ್ರೂಟಸ್ ಪಾತ್ರಕ್ಕೆ ಪ್ರಾಶಸ್ತ್ಯವಿದ್ದರೂ ನಾಟಕಕ್ಕೆ "ಜ್ಯೂಲಿಯಸ್ ಸೀಸರ್" ಎಂಬ ಹೆಸರಿರುವುದು ಸಕಾರಣವಾಗಿದೆ; ಉಚಿತವಾಗಿದೆ—ಸಿ. ಕೆ. ವೆಂ.

ಭೌಮನು, ಸ್ತ್ರೀ ಚೂಡಾಮಣಿಯಾದ ಮಂಡೋದರಿಯ ಆದರ್ಶಪತಿಯು, ಉತ್ಕಟದೇಶಾಭಿಮಾನಿಯು, ಕಲಾಪ್ರೇಮಿಯು! ಹೀಗಿದ್ದೂ ರಾವಣನ ಚ್ಯುತಿಗೆ ಕಾರಣವೇನು? ಇದಕ್ಕೆ ಉತ್ತರ ಒಂದೇ—ಇಷ್ಟು ಸದ್ಗುಣವಂತನಾದರೂ ರಾವಣನು ಅಭಿಮಾನಧನನು. ತನಗೆ ಸರಿ ಯಾರೂ ಇಲ್ಲವೆಂಬ ಹೆಮ್ಮೆಯಿಂದ ತುಂಬಿದ್ದ ಉದ್ದುರುಟುತನದ ಬುದ್ಧಿಯುಳ್ಳವನು. ಇದೊಂದು ಕಳಂಕವೇ ಅವನ ನಾಶಕ್ಕೆ ಕಾರಣವು— ಸ್ವಾಭಿಮಾನಧನರೆಂದರೆ, ಒಬ್ಬನು ಗದಾಯುದ್ಧದ ದುರ್ಯೋಧನನು, ಮತ್ತೊಬ್ಬನು ರಾವಣನು. 'ಒಂದು ಮಸಿಯಬೊಟ್ಟು ಒಂದು ಚಿತ್ರವನ್ನೇ ನುಂಗುತ್ತದೆ' ಎಂಬ ವಿಭೀಷಣನ ಮಾತಿನಂತೆ ಎಂತಹ ಸಂಯಮಿ ಶ್ರೇಷ್ಠನಾದರೂ ತನ್ನದೇ ಒಂದಗ್ಗಳಿಕೆಯ ಪ್ರತಿಷ್ಠೆಯೆಂದು ತಿಳಿದು ಧೂರ್ತನಂತೆ ವರ್ತಿಸುವ ಹಠಮಾರಿತನವೇ ರಾವಣನಿಗೆ ಮೂಲವಾಗಬೇಕಾಯಿತು. ಇದೊಂದು ರುದ್ರನಾಯಕನ ಮುಖ್ಯ ಲಕ್ಷಣವು. ಎರಡನೆಯ ಲಕ್ಷಣವೆಂದರೆ—ದೈವಕಟ್ಟಳೆ ಮತ್ತು ದೈವನಿಯಮಗಳನ್ನು ಪ್ರತಿಭಟಿಸಿ ದೈವಶಕ್ತಿಗೆ ಎದುರು ನಿಲ್ಲುವ ಉದ್ದುರುಟುತನ [ಉದಾಹರಣೆ—'ಶ್ರೀಯವರ 'ಅಶ್ವತ್ಥಾಮನ್']--ಇವೆರಡರಿಂದಲೇ ಗ್ರೀಕ್ ರುದ್ರ ರೂಪಕಗಳ ನಾಯಕರ ಚ್ಯುತಿಯು—ರೂಪಕಕಾರದಿಂದ ಚಿತ್ರಿಸಲ್ಪಟ್ಟಿರುವುದು. ರಾವಣನಿಗೆ ಶಿವನಲ್ಲಿ ಭಕ್ತಿ—ವಿಷ್ಣುವಿನಲ್ಲಿ ಅಸಡ್ಡೆ, ಅನಾದರಗಳು. ದೇವರೇ ಅವನ ಕಟ್ಟಳೆಗಳನ್ನು ಮೀರಿ ಧರ್ಮವನ್ನು ಸದೆಬಡಿದಮೇಲೆ ರಾವಣನಂತಹ ಅಪ್ರತಿಮ ವೀರನೂ ನಾಶವಾಗಲೇಬೇಕು. ರಾವಣನಳಿಯುವುದೂ ಎರಡನೆಯದಕ್ಕಿಂತ ಹೆಚ್ಚಾಗಿ ಮೊದಲನೆಯ ಕಾರಣದಿಂದಲೇ ; ಅಂದರೆ ಅವನ ಸ್ವಾಭಿಮಾನ ಬುದ್ಧಿಯಿಂದಲೇ! ಧರ್ಮಾಧರ್ಮಗಳ ವಿವೇಚನೆಯಿಲ್ಲದೆ ತಸ್ಕರನಂತೆ ವರ್ತಿಸಿ ಕಾಮುಕ ಪಶುವಾಗಿ ನಡೆದ ರಾವಣನಿಗೆ ಅದರ ಸಲುವಾಗಿಯೇ ಮರಣವಾಗಿರಬೇಕಲ್ಲದೆ ಮೊದಲನೆಯ ವ್ಯಾಜದಿಂದಲ್ಲವೆಂದು ಕೆಲವರು ಆಕ್ಷೇಪಿಸಬಹುದು. ಆದರೆ ರಾವಣನಿಗೆ ಪಶ್ಚಾತ್ತಾಪ ಬುದ್ಧಿಯು ಹುಟ್ಟಿದ ಮೇಲೆ—ಆ ಪಾತಕವೂ ಮಾಯವಾಗಲೇಬೇಕು. ಒಂದಿಗೇ ಆ ಪ್ರೇಮಮಯ ಮೂರ್ತಿಯ ಅಕ್ಷಯ ಹಸ್ತಗಳಿಂದ ಕ್ಷಮೆಯೂ ದೊರೆಯಲೇಬೇಕು! ಮಂಡೋದರಿಯು ಹೇಳುವಹಾಗೆ—'ನಡೆಯುವವನು ಒಮ್ಮೆ ಕಾಲುಜಾರುವುದುಂಟು. ಆರ್ಯಪುತ್ರನು ಒಂದು ಅಪರಾಧವನ್ನೇನೋ

ಆಚರಿಸಿದನು. ಆದರೂ ಜೀವನದ ಕಪ್ಪು ಶೇಲಿ ಸಾತ್ವಿಕತೆಯ ಕುಡಿಮಿಂಚು ಗಳು ಮೂಡಿದರೆ ಪಶ್ಚಾತ್ತಾಪದಿಂದ ಪರಿಹಾರವಾಗದ ಪಾತಕವೇ ಇಲ್ಲ'— ಎಂದಮೇಲೆ ರಾವಣನು ಕ್ಷಮಾರ್ಹನೆ. ಅವನು ತನ್ನ ಮಹಾಪರಾಧ ವನ್ನು ತಿಳಿದು ತನ್ನ ತಪ್ಪಿಗೆ ತಾನೇ ಶಿಕ್ಷೆಯನ್ನನುಭವಿಸಿ, ಬೆಂದ ಹೃದಯ ಉಳ್ಳವನಾಗಿ ಕೊನೆಗೆ ತನ್ನನ್ನು ಕವಿದಿರುವ ತಮಸ್ಸನ್ನು ಕಿತ್ತೊಗೆದು ಪರಿತಾಪದಿಂದ ಶುದ್ಧನಾದವನಾದುದರಿಂದಲೇ—ಅವನ ಬಾಯಿಂದ ಈ ದಿವ್ಯವಾಣಿಯು ಹೊರಡುವುದು: 'ಪ್ರೇಯಸಿ, ಆತ್ಮಸಮರದಲ್ಲಿ ಜಯಶಾಲಿ ಯಾಗಲು ನನಗೂ ಆಸೆಯುಂಟು. ರಾಜನಿಗೆ ತನ್ನ ರಾಜ್ಯದಲ್ಲಿರುವವರೆಲ್ಲರೂ ಮಕ್ಕಳ ಸಮಾನ. ಆದಕಾರಣ, ಸೀತೆಯೂ ನನ್ನ ಪ್ರಜೆಯೆಂದು ಭಾವಿಸಿ, ನನ್ನ ಮೇಲಣ ಕಳಂಕವನ್ನು ತೊಡೆದುಹಾಕಬೇಕೆಂಬ ಪ್ರಯತ್ನದಲ್ಲಿ ಹೆಣಗಿ ಕ್ಷತವಿಕ್ಷತವಾಗುತ್ತಿರುವುದನ್ನು ನೀನೇ ಬಲ್ಲೆ. ಒಂದುವೇಳೆ ಸೀತೆಯ ನ್ನೊಪ್ಪಿಸಬೇಕಾದರೂ ಅದಕ್ಕೆ ತಕ್ಕ ವೈಭವದಿಂದ ಒಪ್ಪಿಸುವೆನು. ದಂಪತಿ ಗಳೀರ್ವರಿಗೂ ದಿವ್ಯವಸ್ತ್ರಾಭರಣಗಳ ಮೆಚ್ಚನ್ನು ಸಿದ್ಧಪಡಿಸಿಟ್ಟುಕೊಳ್ಳುವಂತೆ ಕೂಡ ಮಹೋದರನಿಗೆ ಆಜ್ಞಾಪಿಸಿದ್ದೇನೆ.' ಪರಿಶುದ್ಧವಾದ ಆತ್ಮಯಜ್ಞದಲ್ಲಿ ತನ್ನ ಪಾಪಬುದ್ಧಿಯನ್ನು ಹೋಮಮಾಡಿ — ಪುನರ್ಜನ್ಮವನ್ನು ತಾಳಿದ ರಾವಣನ ಸಾವನ್ನು ನೋಡುವ ನಮಗೆ ಎಷ್ಟು ಹೃದಯವೇದನೆಯಾಗ ಬೇಕು! ರುದ್ರನಾಯಕನು ಅಸುವಳಿದರೂ ಹೊಸ ಹುಟ್ಟನ್ನು ಹೊಂದುವು ದರಿಂದ ಅವನು ನಮಗೆ ಆತ್ಮೀಯನೇ ಆಗಿ, ನಮ್ಮ ಅಂತಃಕರಣಗಳೆಲ್ಲವನ್ನೂ ತನ್ನೆಡೆಗೇ ಸೆಳೆದುಕೊಂಡುಬಿಡುತ್ತಾನೆ! ರುದ್ರನಾಯಕನ ಈ ಬಗೆಯ ಹೊಸ ಹುಟ್ಟಿಗೆ ಗ್ರೀಕ್ ಲಕ್ಷಣದಲ್ಲಿ 'Catharsis' ಎಂದು ಹೇಳುವರು. ಆದರೆ ರಾವಣನು ಪುನರ್ಜನ್ಮವನ್ನು ತಳೆದಿದ್ದರೂ ಅವನು ಅಸುವಳಿಯಲೇಬೇಕು. ಏಕೆಂದರೆ ಸ್ವಾಭಿಮಾನಧನನೆಂಬ ತನ್ನ ಎಲ್ಲೆ ಮೀರಿದ ದರ್ಪದಿಂದ ಅವನು ತನ್ನ ಸಾವಿಗೆ ತಾನೇ ಉತ್ತರವಾದಿಯೆಂಬುದನ್ನು ವಾಚಕರೇ ಕೆಳಗಣ ವಾಕ್ಯಗಳಿಂದ ಕಾಣಬಹುದು:—

**ಮಂಡೋದರಿ.**—'ವೀರಾಗ್ರೇಸರನಾದ ರಾಮಚಂದ್ರನಿಗೆ ಸೀತಾ ದೇವಿಯನ್ನೊಪ್ಪಿಸಬೇಕೆಂದಿರುವ ಬಗೆಯನ್ನು ಕೇಳಿ ನನ್ನ ಮನಸ್ಸಿಗೆ ಹರ್ಷವಾಯಿತು!'

**ರಾವಣ.**—'ದೇವಿ! ಏನೆಂದು ಹೇಳಿದೆ? ವೀರಾಗ್ರೇಸರ! ವೀರಾಗ್ರೇಸರ! ಈ ಜಗತ್ತಿನಲ್ಲಿ ವೀರಾಗ್ರೇಸರನೆಂಬ ಹೆಸರು ಒಬ್ಬನಿಗೇ ಸಲ್ಲಬೇಕು! ರಾವಣನೊಬ್ಬನಿಗೇ ಆ ಹೆಸರು. ರಾಮನನ್ನು ಸೆರೆ ಹಿಡಿದು ತಂದ ಬಳಿಕ ಸೀತೆಯನ್ನೊಪ್ಪಿಸಿ ಅವನನ್ನು ಬೀಳ್ಕೊಳ್ಳುವೆನು. ಇಲ್ಲವೇ ಈ ತನುವನ್ನು ಈಡಾಡಿ ವೀರನಿಗೆ ಉಚಿತವಾದ ವೀರ ಮರಣವನ್ನು ಪಡೆಯುವೆನು'—

ಸೀತಾಪಹರಣಕ್ಕಾಗಿ ತಾನು ದುಃಖದ ಮಡುವಿನಲ್ಲೇ ಮುಳುಗಿದ್ದರೂ ತನ್ನ ಸ್ವಾಭಿಮಾನತೆಯೆಂಬ ಉದ್ದುರುಟತನದಿಂದ ಧರ್ಮಾಂಧನಾಗಿ ರಾವಣನು ಕೊನೆಗೆ ಮಂಡೋದರಿಯು ಹೇಳಿದಂತೆ—ಮೃತ್ಯುದೇವತೆಯ ಬಾಯೊಳಕ್ಕೆ—'ಕೊಂದು ಕೊಲ್ಲಿಸಿಕೊಳ್ಳಲು' ಹೋಗಬೇಕಾಗುವುದು!

'ಮಂಡೋದರಿ' ಪಾತ್ರನಿರೂಪಣೆಯೊಂದರಿಂದಲೇ ಶ್ರೀ॥ ವೆಂಕಟ ರಾಮಯ್ಯನರ ಕೀರ್ತಿಯು ಕರ್ಣಾಟಕ ಸಾಹಿತ್ಯ ಪ್ರಪಂಚದಲ್ಲಿ ಚಿರಸ್ಥಾಯಿ ಯಾಗಿ ನಿಲ್ಲಬಲ್ಲುದು ಎಂದು ನಾವು ನಿಸ್ಸಂದೇಹವಾಗಿ ಹೇಳಬಹುದು. ವಜ್ರವನ್ನು ಕುಂದಣದಲ್ಲಿಟ್ಟಂತೆ, ಚಿನ್ನಕ್ಕೆ ಮೆರಗುಕೊಟ್ಟಂತೆ ಇವರ 'ಮಂಡೋದರಿ' ದೇವಿಯು ಕಾಣುವಳು. ಭಾವೀ ಭಾರತದ ಹೆಣ್ಣು ಮಕ್ಕಳಿಂತಿರಬೇಕೆಂಬೊಂದಭಿಪ್ರಾಯ ಆದರ್ಶಗಳನ್ನಿಟ್ಟುಕೊಂಡೇ ಈ ಪಾತ್ರ ರಚನೆಗೆ ಶ್ರೀಯುತರು ಕೈಹಾಕಿರಬೇಕೆಂದೆನ್ನಿಸುತ್ತದೆ! ಮೊದಲೇ ಮಂಡೋ ದರಿಯು ಪಾಪಗಳನ್ನು ಪರಿಹಾರಮಾಡುವ ಪಂಚಕನ್ಯಾರತ್ನಗಳ ವೃಂದಕ್ಕೆ ಸೇರಿದವಳು, ಸರ್ವಮಾನ್ಯಳು, ಜಗದ್ವಂದ್ಯಳು, ಆದರ್ಶಕನ್ಯಾಮಣಿಯು. ಹೀಗಿರುವಲ್ಲಿ ನಿಶ್ಚಲಹೃದಯದಿಂದ ನಿರ್ಮಲಭಾವದಿಂದ ಉಚ್ಛಾವೇಶದಿಂದ ಅಂತಹ ಲಲನಾಮಣಿಯ ಪಾತ್ರರಚನಾಕಾರ್ಯಕ್ಕೆ ಕವಿಯು ಕೈಹಾಕಿದಲ್ಲಿ ಆ ಕಾರ್ಯವು ಸಫಲಗೊಳ್ಳುವುದರಲ್ಲಿ ಸಂದೇಹವೇನು! ಒಟ್ಟಿನಲ್ಲಿ ಇಷ್ಟು ಹೇಳಬಹುದು: 'ಆಂಗ್ಲ ಸಾಹಿತ್ಯದಲ್ಲಾಗಲಿ, ಪ್ರಪಂಚದ ಇತರ ಯಾವ ಅಗ್ಗಳಿಯ ಸಾಹಿತ್ಯದಲ್ಲಾಗಲಿ—ಸೀತಾದೇವಿಯನ್ನು ಮೀರಿಸುವಂತಹ ಸ್ತ್ರೀ ಪಾತ್ರವನ್ನು ಇದುವರೆಗೆ ಯಾರೂ ರಚಿಸಿಲ್ಲ. ಒಂದುವೇಳೆ ಸ್ವಲ್ಪ ಹೆಚ್ಚು ಕಡಿಮೆಯಾಗಿ ಸೀತಾದೇವಿಯೊಡನೆ ಸಮದೂಗಬಹುದಾದ ಪಾತ್ರವು ಮತ್ತೊಂದಿದ್ದಲ್ಲಿ ಅದನ್ನು ಷೇಕ್ಸ್‌ಪಿಯರನ—'ಒಥೆಲೊ' ರುದ್ರರೂಪಕದ

'ಡೆಸ್ಡಿಮೋನ'ಳಲ್ಲಿ ಮಾತ್ರವೇ ಕಾಣಲಾದೀತು—ಎಂಬುದಾಗಿ ಅನೇಕ ಪೌರ್ವಾತ್ಯ ಪಾಶ್ಚಿಮಾತ್ಯ ವಿಮರ್ಶಕರು ಹೇಳುತ್ತಾರೆ. ಸೀತಾದೇವಿಯು— 'ಶ್ರೀ' ಯ ಅವತಾರವೆಂಬಂಶವನ್ನು ನಾವು ಒತ್ತಡವೆಗಿಟ್ಟಲ್ಲಿ ಶ್ರೀಯುತರ 'ಮಂಡೋದರಿ' ಪಾತ್ರರಚನೆಯು 'ಸೀತಾದೇವಿಯ' ಪಾತ್ರರಚನೆಗೆ ಯಾವ ಪ್ರಕಾರದಲ್ಲಿಯೂ ಕಡಮೆಯಿಲ್ಲವೆಂದು ಹೇಳಬಹುದು! ಈ ಪಾತ್ರ ರಚನೆಯ ವಿಷಯವಾಗಿ ಹೆಚ್ಚು ಹೇಳುವುದೆಂದರೆ, 'ಹಾಲು ಬಿಳುಪಾಗಿದೆ' ಯೆಂದು ಹೇಳಿದಂತಾಗುವುದು! 'ಸೀತೆಯ' ಪಾತ್ರರಚನೆಯೂ—ಸನ್ನಿವೇಶ ಸಂದರ್ಭಗಳೂ ನಾಟಕ ಕರ್ತೃಗಳಿಗೆ ದೊರಕಿದಂತೆ ಉಚ್ಚರೀತಿಯಲ್ಲೇ ಸಾಗಿ ಹೋಗಿವೆ!

ಶ್ರೀಯುತರ ಮನಸ್ಸು ಹೇಗೆ ಸರಳವಾದುದೋ ಹಾಗೆಯೇ ಸರಳವಾಗಿ, ಮೃದುವಾಗಿ, ಮಧುರವಾಗಿ ಸಮಯಕ್ಕೆ ತಕ್ಕಹಾಗೆ ವೀರಾವೇಶಯುಕ್ತವಾಗಿ ಭಾಷೆಯೂ ರಸಪೋಷಣೆಯನ್ನು ಸಹಜರೀತಿಯಲ್ಲಿ ಮಾಡುತ್ತ ಮುಂದು ವರಿದುಹೋಗಿರುತ್ತದೆ. ಆವೇಶವೊಂದಿದ್ದಲ್ಲಿ—ಕವಿತೆಯು ಗದ್ಯದಲ್ಲಿಯಾಗಲಿ, ಪದ್ಯದಲ್ಲಿಯಾಗಲಿ ಹೇಗೆ ರಂಜನೆಯಾಗಬಲ್ಲುದು ಎಂಬುದಕ್ಕೆ ಕೆಳಗಿನ ಮಾತುಗಳೇ ಸಾಕ್ಷ್ಯವಲ್ಲವೆ :—

**ರಾವಣ**— '.........ಮಾತೆ! ಜಗತ್ತಿಗೆ ಮಾತಾಪಿತೃಗಳಾದ ನಿರ್ಮ್ಮಾರ್ವರ ಮೆಚ್ಚಿಕೆಗೂ ಪಾತ್ರನಾದ ನಾನು ಅಂದು ಉತ್ಸಾಹದಿಂದ ಉಬ್ಬಿಹೋಗಿದ್ದೆನು. ಅದೇ ನಾನು ಇಂದು ಶೋಕಸಂತಪ್ತನಾಗಿ ಕುಗ್ಗಿ ಹೋಗಿರುವೆನು. ನನ್ನನ್ನು ಕಂಡು ನಿಮಗೆಷ್ಟು ಜಿಗುಪ್ಸೆಯೊ! ಅಯ್ಯೋ! (ಅರಿವಾಸಿ ಗದ್ಗದ ಧ್ವನಿಯಿಂದ) ಮಾಡಿದೆನು—ಮಾಡಿದೆನು, ಘೋರ ಪಾತಕವ ನಾ ಮಾಡಿದೆನು! ದೀನನನು ಕಾಪಿಡುವ ಕರುಣಾಳು ಮೂರುತಿ ಗಳೇ! ಪೋದಿರೆಲ್ಲಿಗೆ ನೀವು! ಗಿರಿಜೆಯರಸನೆ! ಮೃತ್ಯುವನು ಹಣಿದ ನಿನ್ನ ಶೂಲಮನೆಲ್ಲಿ ಮರೆತೆ? ಬಾರೆನ್ನ ಪುಣ್ಯನಿಧಿಯೇ, ಬಾರೈ ದಿವಿಜರೊಡೆಯ, ಪಾಪಚೇತನನ ಕೊಲುವೆಯಾದೊಡೆ ಕೊಲ್ಲುಬಾ, ಕೈಲಾಸಗಿರಿಯ ತೂಗಿದ ತೋಳ ತುಲೆಯೊಳೇ ಪರವಧುವ ಸೆಳೆತಂದವನ ನೋಡುಬಾ, ನೋಡುಬಾ' ಸಿಡಿಲುಗಳ ಮಳೆಗರೆದು ಹರಣವನು ಕೊಳುವುದಕೆ ಬೇಗಬಾ, ಬೇಗಬಾ' —'Poetic Prose' ಎಂದು ನಾವು ಕರೆಯುವುದು ಇಂತಹುದನ್ನು ತಾನೆ!

—**ಸುಬೋಧ (ಸಂಪುಟ ೮, ಸಂಚಿಕೆ ೭).**

[ಮೈಸೂರು ಸಂಸ್ಥಾನದ ಮುಖ್ಯ ನ್ಯಾಯಾಧೀಶರಾಗಿದ್ದು ಆ ಹುದ್ದೆಯಿಂದ ವಿಶ್ರಾಂತರಾಗಿರುವ ರಾಜಧರ್ಮಪ್ರವೀಣ ದಿವಾನ್ ಬಹದ್ದೂರ್ ಶ್ರೀಮಾನ್ ಕೆ. ಎಸ್. ಚಂದ್ರಶೇಖರ ಐಯರವರು "ಮಂಡೋದರಿ" ನಾಟಕಾವಲೋಕನಕ್ಕೆ ದಯಮಾಡಿದ್ದು ಸದಭಿಪ್ರಾಯವನ್ನು ಸೂಚಿಸಿ ಆಶೀರ್ವದಿಸಿ ಉಪಕರಿಸಿದರು. ಅವರ ಪತ್ರದ ಕೆಲವು ವಾಕ್ಯಗಳನ್ನು ಮುಂದೆ ಕೊಟ್ಟಿದೆ.]

..................................................I made a point of attending the evening performance at the Sivananda Theatre. It is no exaggeration to say that I did not feel the passing of time, and that the three hours occupied was one continuous period of enjoyment and appreciation. The witnessing of a play as actually staged gives one a far better idea of the plot and a deeper insight into characters than the mere reading of it in cold print can do. As a matter of fact I begin to realize the greatness and beauty of that gem of womanhood Mandodari and to feel that she is a real living person, to a greater extent than I did at all before. It was a great advantage, of course, to have the part of heroine played by a real woman, instead of a young man with a broken voice masquerading in woman's clothes; and I may say that Sreemathi Sarojini acted the part to perfection. Mr. Raghavachari as Ravana was, also, as of course, superb; and at times I could not help feeling a certain amount of sympathy for the unhappy Rakshasa king.

I must add, in conclusion, that by the drama of "Mandodari" you have not only added to your laurels as a capable and original writer, but also enriched our vernacular literature with a work of real merit.

—Rajadharmapravina Diwan Bahadur
K. S. CHANDRASEKHARA AIYAR, B.A., B.L.,
Retired Chief Justice of Mysore.

# ಮಂಡೋದರಿ

## ಒಂದನೆಯ ಅಂಕ

### ದೃಶ್ಯ ೧

[ರಾವಣನ ಒಡ್ಡೋಲಗ. ದಿವ್ಯಾಭರಣ ಭೂಷಿತನಾಗಿ ರಾವಣನು ಸಿಂಹಾಸನದಲ್ಲಿ ಮಂಡಿಸಿರುವನು. ಮಹೋದರ, ಪ್ರಹಸ್ತ ಮುಂತಾದವರೂ, ಕುಂಭಕರ್ಣ ವಿಭೀಷಣರೂ, ಸಾಮಂತರೂ, ಇತರ ಪರಿಜನರೂ ಸಭೆಯಲ್ಲಿರುವರು. ವಂದಿಮಾಗಧರು ಸ್ತೋತ್ರಮಾಡಿ ಪರಾಕು ಹೇಳುತ್ತಿರುವಲ್ಲಿ ಸಮಸ್ತರೂ ಎದ್ದು ನಿಲ್ಲುವರು. ರಾವಣನು ಪ್ರಸನ್ನವಾದ ಮುಖಮುದ್ರೆಯಿಂದ ಕುಳಿತಿರುವನು. ಸಮಯ: ಮಧ್ಯಾಹ್ನದ ಮೇಲೆ.]

**ವಂದಿಮಾಗಧರು.**—ಸಕಲ ಭುವನ ಸಂಸ್ತೂಯಮಾನ, ತ್ರಿಭುವನಮಲ್ಲ, ದಿಗಂತ ವಿಶ್ರಾಂತ ಕೀರ್ತಿ ಪ್ರಭಾವಲಯಿತ ದಿವ್ಯಾಸ್ಯ, ರಾಕ್ಷಸಕುಲ ವಿಜಯಧ್ವಜ, ವೀರಶ್ರೀ ವಿರಾಜಿತ ಭುಜಸ್ತಂಭ, ಲಲಿತ ಕಲಾ ಸಂವರ್ಧಕ, ಸಾಮಗಾನ ಕೋವಿದ, ಸಾಮಂತಜನ ಸುರಧೇನು, ಪ್ರಜಾರಂಜನ ಪರಾಯಣ, ನಿಗಮಾರ್ಥ ನಿಪುಣ, ರಾಜಕುಲಾವತಂಸ, ಅರಿಹೃದಯ ವಿದ್ರಾವಣ, ಶ್ರೀ ರಾವಣೇಂದ್ರ ಭೂಪಾಲ, ಪರಾಕು.

**(ಸಭಿಕರೆಲ್ಲರೂ ನಮಿಸುವರು. ರಾವಣನು ಸಭೆಗೆ ಕೈಮುಗಿಯುವನು. ವಂದಿಮಾಗಧರನ್ನುಳಿದು ಇತರರೆಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತುಕೊಳ್ಳುವರು.)**

**ವ ಂ ದಿ ನಾ ಯ ಕ.**—(ಮುಂದೆ ಬಂದು ತಲೆಬಾಗಿ ವಂದಿಸಿ) ದೇವರು ವಿಜಯ ಯಾತ್ರೆಗಾಗಿ ದಯಮಾಡಿಸಿದ್ದಾಗ್ಗೆ, ಯಾರಿಂದಲೂ ಹಿಡಿಯಲಸಾಧ್ಯವಾಗಿದ್ದ ಮತ್ತಗಜವನ್ನು ಅನಾಯಾಸವಾಗಿ ಹಿಡಿದು, ಅದಕ್ಕೆ ಭುವನಭೂಷಣವೆಂಬ ಹೆಸರನ್ನು ದಯಪಾಲಿಸಿದ್ದುದು ಸರಿಯಷ್ಟೆ. ಆ ಭದ್ರಗಜವು ಈಗ ಸಾಧುವಾಗಿ, ಬಾಲಕರ ಮೇಳದೊಡನೆ ಆನಂದ ಕೇಳಿಗಾರಂಭಿಸಿದೆ, ಪರಾಕು.

**ರಾವಣ.**—ಭಾಪು, ಭಾಪು, ಬಹಳ ಸಂತೋಷ. ಭುವನಭೂಷಣವೆಂಬ ಆ ಭದ್ರಗಜವನ್ನು ಪಳಗಿಸಿದ ಮೇಧಾವಿಯಾದ ಮಾವುತನಿಗೆ ಉಚಿತವಾದ ಪಾರಿತೋಷಿಕವನ್ನು ಕೊಡುವಂತೆ ನಾನು ಆಜ್ಞಾಪಿಸಿರುವೆನೆಂದು ಕೋಶಾಧ್ಯಕ್ಷನಿಗೆ ತಿಳಿಸು.

**ವಂದಿನಾಯಕ.**—ಅಪ್ಪಣೆ. (ತೆರಳುವನು.)

**ರಾವಣ.**—ರಾಯಸಮಲ್ಲ! ನಮ್ಮ ರಾಜ್ಯದಲ್ಲಿ ದೊರೆತ ಕೆಲವು ಶ್ರೇಷ್ಠ ವಸ್ತುಗಳನ್ನು ಅಗ್ರಜನಾದ ಕುಬೇರನೇ ಮುಂತಾದವರಿಗೆ ನಾವು ಕಳುಹಿಸಿದ್ದುದು ಸರಿಯಷ್ಟೆ. ಅವುಗಳ ವಿಚಾರವೇನಾಯಿತು?

**ರಾಯಸಮಲ್ಲ.**—(ಅನುಮಾನಿಸಿ) ಮಹಾಪ್ರಭು! ಮಹಾ....

**ರಾವಣ.**—ನಮ್ಮ ಅಗ್ರಜನಾದ ಕುಬೇರನಿಗೆ ನಾವು ಪಾದ ಕಾಣಿಕೆಯಾಗಿ ಕಳುಹಿಸಿದ್ದ ದಿವ್ಯಾಶ್ವದ ವಿಚಾರವೇನಾಯಿತು?

**ರಾಯಸಮಲ್ಲ.**—ಮಹಾಪ್ರಭು! ಅವರು ಪ್ರೀತಿಯಿಂದ ಅದನ್ನು ಸ್ವೀಕರಿಸಿ, ಸನ್ನಿಧಾನಕ್ಕೆ ಸಮಸ್ತ ಸನ್ಮಂಗಳಗಳೂ ಲಭಿಸುತ್ತಿರಬೇಕೆಂದು ಆಶೀರ್ವದಿಸಿ ಓಲೆಯನ್ನು ಬರೆದಿರುವರು.

**ರಾವಣ.**—ಅಗ್ರಜನ ಕರುಣಾದ್ರ್ರಹೃದಯವನ್ನೂ, ಪ್ರೀತಿ ವಾತ್ಸಲ್ಯಗಳನ್ನೂ ಬಲ್ಲೆನು. ನನ್ನ ಅಲ್ಪವಾದ ಸೇವೆಯನ್ನು ಆತನು

ಸ್ವೀಕರಿಸಿದುದೇ ಒಂದು ಸಂತೋಷ ವಿಚಾರ. ಇನ್ನು ಕೈಲಾಸಕ್ಕೆ ಹೋಗಿದ್ದ ಸಾಧುಶ್ರೇಷ್ಠರ ವಿಚಾರವೇನಾಯಿತು ?

**ರಾಯಸಮಲ್ಲ.**—ದೇವರು ಕಳುಹಿಸಿದ ಪಾರಿತೋಷಿಕವನ್ನು..

**ರಾವಣ.**—(ರಾಯಸಮಲ್ಲನ ಮಾತುಗಳು ಪೂರೈಸುವ ಮೊದಲೆ) ಶಾಂತಂ ಪಾಪಂ! ಶಾಂತಂ ಪಾಪಂ! (ಮುಗುಳು ನಗೆಯಿಂದ ಒಂದೆರಡು ಕ್ಷಣ ಸುಮ್ಮನಿದ್ದು) ರಾಯಸಮಲ್ಲ! ಇಂದು ನಿನ್ನ ಬುದ್ಧಿಯು ನೆಟ್ಟಗಿಲ್ಲ. ಏನೋ ಒಂದು ಪ್ರಮಾದವು ನಡೆದಿರಬೇಕು. ಮಹೇಶ್ವರನು ನಮ್ಮ ಕುಲದೈವವು. ನಾನೇ, ಅವನಿಗೆ ಪಾರಿತೋಷಿಕವನ್ನು ಕಳುಹಿಸುವವನು! ನಾನು ಜೀವರತ್ನಗಳ ಅಕ್ಷಮಾಲೆಯನ್ನು ಕಳುಹಿಸಬಹುದೆಂದು ಪರಶಿವನು ಅಪ್ಪಣೆಯನ್ನಿತ್ತುದೇ ಮಹಾಪ್ರಸಾದ. ಅದು ನನ್ನ ಪೂರ್ವ ಪುಣ್ಯ.

**ರಾಯಸಮಲ್ಲ.**—ಮಹಾಪ್ರಭು! ನನ್ನದು ಸರ್ವಾಪರಾಧವಾಯಿತು. ಮನ್ನಿಸಬೇಕು. ತಾವು ಭಕ್ತಿಯಿಂದ ಕಳುಹಿಸಿದ್ದ ಜಪಮಾಲೆಯನ್ನು ಮಹೇಶ್ವರನು ಆದರದಿಂದ ಸ್ವೀಕರಿಸಿದನು. ಧರ್ಮಪರಾಯಣತೆಯ ವಜ್ರಕವಚವನ್ನು ತಾವು ನಿರಂತರವೂ ಧರಿಸಿರಬೇಕೆಂಬ ಸಂದೇಶದೊಡನೆ ಮಹೇಶ್ವರನು ದಿವ್ಯಾಸ್ತ್ರಗಳನ್ನು ಕಳುಹಿಸಿರುವನು.

**ರಾವಣ.**—ಅನುಗ್ರಹೀತನಾದೆನು. ನೀಲಾಚಲ ನಿಕಾಯವೆನಿಸಿ ಶೋಭಿಸುತ್ತಿದ್ದ ಮಹಿಷರಾಜನನ್ನು ಯಮಧರ್ಮನು ಸ್ವೀಕರಿಸಿರುವನಷ್ಟೆ?

**ರಾಯಸಮಲ್ಲ.**—ಸ್ವೀಕರಿಸಿ ಸಂತುಷ್ಟನಾಗಿರುವನು, ಮಹಾಪ್ರಭು.

**ರಾವಣ.**—(ದರ್ಪದಿಂದ) ಸಂತೋಷ. ನಾವು ಪಾರಿತೋಷಿಕ ವಾಗಿ ಕಳುಹಿಸಿದ ಮುತ್ತಿನಹಾರವನ್ನು ಮಹೇಂದ್ರನು ಸ್ವೀಕರಿಸಿದ ನಷ್ಟೆ?

**ರಾಯಸಮಲ್ಲ.**—ಮಹಾಪ್ರಭು! ಮಹಾಪ್ರಭು!

**ರಾವಣ.**—(ಅಪ್ರಸನ್ನವಾದ ಮುಖಮುದ್ರೆಯಿಂದ) ಹ! ನಾನು ಶಂಕಿಸಿದಂತೆಯೇ ಆಯಿತು. ಸಂಶಯವೇಕೆ! ಸ್ಪಷ್ಟವಾಗಿಯೇ ತಿಳಿಸು.

**ರಾಯಸಮಲ್ಲ.**—ಸನ್ನಿಧಾನದಿಂದ ಅಭಯವಾಗಬೇಕು, ಮಹಾಪ್ರಭು.

**ರಾವಣ.**—ರಾವಣನ ಪ್ರಜೆಗಳಿಗೆ ಅವನ ಬಳಿಯಲ್ಲಿ ಭಯ ವೆಲ್ಲಿಯದು? ನಿಶ್ಶಂಕೆಯಿಂದ ನಿಜಾಂಶವನ್ನು ತಿಳಿಸು.

**ರಾಯಸಮಲ್ಲ.**—ಸ್ತ್ರೀಯರಿಗುಚಿತವಾದ ಹಾರವನ್ನು ದೇವೋ ತ್ತಮನಾದ ಸುರೇಂದ್ರನಲ್ಲಿಗೆ ಕಳುಹಿಸಿ ಸನ್ನಿಧಾನವು ಅವಮಾನ ಮಾಡಿದಹಾಗಾಯಿತಂತೆ. ಅಲ್ಲದೆ, ರಾಕ್ಷಸ ರಾಜನಿಂದ ಬಂದ ಮುತ್ತಿನ ಹಾರಕ್ಕೆ ದೇವಲೋಕದಲ್ಲಿ ಪುರಸ್ಕಾರವು ದೊರೆಯುವುದು ಉಚಿತವೂ ಅಲ್ಲವಂತೆ.

**ರಾವಣ.**—(ತಿರಸ್ಕಾರ ಸೂಚಕವಾದ ಮುಗುಳು ನಗೆಯಿಂದ ಕೂಡಿ) ಇರಲಿ. ದೇವೋತ್ತಮ, ದೇವೋತ್ತಮ, ಈ ದೇವೋತ್ತಮನೆಂಬ ಪಿತ್ತವನ್ನು ನಾನು ಇಳಿಸುವೆನು. ಕೈಲಾಸಪತಿಯ ದಯವೊಂದಿದ್ದರೆ ತ್ರಿಭುವನಮಲ್ಲರ ಮಲ್ಲನಾದ ಈ ರಾವಣನಿಂದ ಸುರಲೋಕವು ಸೂರೆ ಯಾಗುವುದೋ ಇಲ್ಲವೋ ನೋಡುವೆನು. ಸ್ತ್ರೀಯರಿಗುಚಿತವಾದ ಹಾರ ವೆಂದು ಅಲೆಗಳೆದ ಕೈತವ ಶಿಖಾಮಣಿಯಾದ ಕಪಟ ಸುರೇಂದ್ರನನ್ನು ಸೆರೆಹಿಡಿದು, ಅವನ ದುರಹಂಕಾರಕ್ಕೆ ತಕ್ಕ ಶಾಸ್ತಿಯನ್ನು ಮಾಡಿಸು ವೆನು. ಹೆಣ್ಣುತನವನ್ನೇ ಕಡೆಗಂಡು ಗಳುಹುವ ಇವನಲ್ಲವೇ, ಸಮಸ್ತವೂ

ದೇವದೇವನ ಲೀಲೆಯೆಂದು ನಂಬಿರುವ ಸಮದರ್ಶಿ. ಇವನಿಗೆ ಬುದ್ಧಿ ಕಲಿಸಲು ನಾಳೆಯೇ ಅಮರಾವತಿಗೆ ಪ್ರಯಾಣ.

**ಕುಂಭಕರ್ಣ.**—(ಸ್ವಗತ) ಅಗ್ರಜನ ದಯದಿಂದ ಯುದ್ಧವು ಒದಗುವಂತಿದೆ. ಅದೂ ನಾನು ನಿದ್ರೆಯಿಂದ ಏಳುವ ವೇಳೆಗೆ ಸರಿಯಾಗಿ. ಈ ಯುದ್ಧವು ಮುಗಿಯುವವರೆಗೂ ನಾನು ಮಲಗುವುದಿಲ್ಲ. (ಪ್ರಕಾಶ) ಅಗ್ರಜ! ಅಗತ್ಯವಾಗಿ ಹಾಗೆ ಮಾಡೋಣ. ನನಗೆ ಯುದ್ಧ ಕಾಲದಲ್ಲಿ ಹತ್ತು ತಲೆಗಳೂ, ಇಪ್ಪತ್ತು ತೋಳುಗಳೂ ಒದಗುವಂತೆ ಪರಮೇಶ್ವರನು ಕೊಟ್ಟಿರುವ ವರವೂ, ಸಕಾಲಕ್ಕೇ ಲಭಿಸಿದಂತಾಯಿತು. ಈ ದಿನವೇ ಬೇಕಾದರೂ ಅಮರಾವತಿಗೆ ಪ್ರಯಾಣಮಾಡೋಣ.

**ರಾವಣ.**—ಭಾಪು, ಸಹೋದರ, ಭಾಪು. ವೀರಶ್ರೀಯು ನಿನಗೆ ವಿಜಯವನ್ನು ಕರುಣಿಸಲಿ!

**ವಿಭೀಷಣ.**—ಅಗ್ರಜ! ದುಡುಕುವುದು ತರವಲ್ಲ. ಕಲ್ಪವೃಕ್ಷ ಚಿಂತಾಮಣಿಗಳ ಒಡೆಯನಾದ ವಜ್ರಧರನೊಡನೆ ವೈರವೇಕೆ?

**ರಾವಣ.**—ವತ್ಸ! ಅವನು ವಜ್ರಧರನಾದರೆ ನಾವು ದಿವ್ಯಾಸ್ತ್ರಧರರು. ನನ್ನ ಬಾಹುಗಳೇ ನನ್ನ ಪ್ರಜೆಗಳ ಕಲ್ಪವೃಕ್ಷಗಳು. ನೀವೀರ್ವರು ಸಹೋದರರೇ ನನ್ನ ಮೆಚ್ಚಿನ ಪ್ರಜೆಗಳ ಚಿಂತಾಮಣಿಗಳು. ಪ್ರಜೆಗಳ ಸೌಖ್ಯ ಸಾಧನೆಗೂ, ರಾಜ್ಯದ ಗೌರವ ರಕ್ಷಣೆಗೂ ನಮ್ಮ ಪ್ರಾಣಗಳೇ ಮೀಸಲು. ನಾಳೆಯೇ ವಿಜಯಪ್ರಯಾಣ.

**ವಿಭೀಷಣ.**—(ಎದ್ದು ನಿಂತು) ಚಿತ್ತ, ಆಗಬಹುದು.

**ಪ್ರತಿಹಾರಿ.**—(ಪ್ರವೇಶಿಸಿ) ಜಯವಾಗಲಿ, ಮಹಾಪ್ರಭು! ಶ್ವೇತದ್ವೀಪದ ಮಹಾಕಾಯ ಮಹಾರಾಜನನ್ನು ಸೆರೆಮನೆಯಿಂದ ತಂದಿರುವರು.

**ರಾವಣ.**—ಬರಲಿ.

**ಪ್ರತಿಹಾರಿ.**—ಅಪ್ಪಣೆ. (ಹೊರಟು ಹೋಗುವನು.)

(ಕಾವಲುಗಾರರೊಡನೆ ಮಹಾಕಾಯನು ಪ್ರವೇಶಿಸುವನು. ರಾವಣ ನನ್ನು ಕಂಡು ಹೊರಹೊಮ್ಮುತ್ತಿರುವ ಕೋಪವನ್ನು ಕಷ್ಟದಿಂದ ದಮನ ಮಾಡಿ, ತೀಕ್ಷ್ಣ ದೃಷ್ಟಿಯಿಂದ ನೋಡುತ್ತಿರುವನು. ಅವನನ್ನು ಸೈನಿಕರು ಬಳಸಿ ನಿಲ್ಲುವರು.)

**ರಾವಣ.**—ವೀರವರ! ಹೇಳತಕ್ಕುದೇನಾದರೂ ಉಂಟೋ?

**ಮಹಾಕಾಯ.**—ಹೇಳತಕ್ಕುದೇನುಂಟು! ಗೆಲವಿನ ಸಿರಿಯು ನನಗೆ ದೊರೆತಿದ್ದರೆ, ಆಗ ಹೇಳುತ್ತಿದ್ದೆ. ಸೋಲಿನ ಶೂಲವು ಎದೆಗೆ ನಾಟಿದೆ. ಈಗ ವ್ಯರ್ಥಾಲಾಪಮಾಡಿ ಫಲವೇನು?

**ರಾವಣ.**—ವೀರಶ್ರೇಷ್ಠನ ವೀರವಾಣಿಯಿಂದ ಬರುವ ವ್ಯರ್ಥಾ ಲಾಪದಲ್ಲಿಯೂ ಹುರುಳಿನ ಹೊಗರುಂಟು. ಬಲುಹಿನ ಬಣಿತೆಯುಂಟು. ಧೈರ್ಯವಾಗಿ ಹೇಳು. ನಾನೇ ಸೆರೆ ಸಿಕ್ಕಿದ್ದರೆ, ನೀನೇನು ಮಾಡುತ್ತಿದ್ದೆ? ನಿರ್ಭಯವಾಗಿ ಹೇಳು.

**ಮಹಾಕಾಯ.**—(ತಿರಸ್ಕಾರಪೂರಿತವಾದ ನಗೆಯಿಂದ) ಜೀವ ಗಳ್ಳನಾದ ಹೇಡಿಗೆ ಹೆದರಿಕೆ. ರಾವಣೇಶ್ವರ! ನಿರ್ಭಯವಾಗಿ ಹೇಳು ವೆನು. ಆಲಿಸಿ ಕೇಳು. ನೀನು ಸೆರೆ ಸಿಕ್ಕಿದ್ದರೆ, ನಿನ್ನ ಚರ್ಮವನ್ನೇ ಸುಲಿಸಿ, ದೇಹವನ್ನು ಇಬ್ಬಗೆಯಾಗಿ ಸೀಳಿಸಿ ಕೊಲ್ಲಿಸುತ್ತಿದ್ದೆ. ಚಕ್ರಾಧಿ ಪತಿಯೆಂದುಕೊಂಡು ಹಿಗ್ಗುತ್ತಿದ್ದೆ.

**ರಾವಣ.**—(ಸ್ವಲ್ಪ ನಕ್ಕು) ಆ ಮಾತು ಹೋಗಲಿ. ರಾವಣನು ಸಮ್ರಾಜನೆಂಬುದನ್ನು ಈಗಲಾದರೂ ಒಪ್ಪಿಕೊಂಡಿರುವೆಯಷ್ಟೆ.

**ಮಹಾಕಾಯ.**—ರಾವಣೇಶ್ವರನು ಸಿಂಹ ಪರಾಕ್ರಮಿಯೆಂಬು ದನ್ನು ಮಾತ್ರ ಒಪ್ಪಿಕೊಳ್ಳುತ್ತೇನೆ. ಆದರೂ, ಅವನನ್ನು ಆಕ್ಷೇಪಿಸು ವವರೂ ಇದ್ದಾರೆ.

**ರಾವಣ.**—ಏತಕ್ಕಾಗಿ? ಏನೆಂದು?

**ಮಹಾಕಾಯ.**—ಶೂರಾಗ್ರಣಿಯೆಂದು ಹೆಮ್ಮೆ ಹೇಳಿಕೊಳ್ಳು ತ್ತಿರುವವನು ಶಿವಧನುಸ್ಸಿಗೆ ಶಿಂಜಿನಿಯನ್ನೇರಿಸಲು ಮಿಥಿಲಾ ಪಟ್ಟಣಕ್ಕೆ ಹೋಗಲಿಲ್ಲವೆಂದು. ರಾವಣೇಶ್ವರ! ಸಕಲ ರಾಜ್ಯಗಳ ಸುಂದರ ವಸ್ತುಗಳನ್ನೂ ರಾಶಿಹಾಕಿಕೊಂಡಿರುವ ನೀನು ಲಾವಣ್ಯ ಜಲಧಿಯಾ ಗಿಯೂ, ಜಗತ್ತಿಗೇ ಭೂಷಣಪ್ರಾಯಳಾಗಿಯೂ ಇರುವ ಜಾನಕಿ ಯನ್ನು ವರಿಸಲಿಲ್ಲವೆಂದು.

**ರಾವಣ.**—(ಸ್ವಗತ) ಇವನೂ ಹೀಗೆ ಹೇಳುತ್ತಾನೆ. ಸೀತೆಯು ಸುಂದರಿಯೆಂದೇನೋ ಕೇಳಿದ್ದೆನು. ಆದರೆ, ಅಷ್ಟು ಸುಂದರಿಯೇ! ಇರಲಿ. (ಪ್ರಕಾಶ) ಸೀತಾ ಸ್ವಯಂವರಕ್ಕೆ ಮೊದಲೇ ವಿವಾಹಿತನಾಗಿದ್ದ ನನ್ನ ವಿಚಾರದಲ್ಲಿ ಯಾರೂ ಹೀಗೆನ್ನರು. ಕೈಲಾಸಗಿರಿಯನ್ನೇ ತೋಳ ತುಲೆಯಲ್ಲಿ ತೂಗಿ ಶಿವನನ್ನೇ ತಲೆದೂಗಿಸಿದವನಿಗೆ ಆ ಧನುಸ್ಸಿಗೆ ಶಿಂಜಿನಿ ಯನ್ನೇರಿಸುವುದು ಅಸಾಧ್ಯವಾಗುತ್ತಿದ್ದಿತೆ? ಪ್ರಹಸ್ತ! ಆಯುಧವು ಸಿದ್ಧವಾಗಿರುವುದೊ?

**ಪ್ರಹಸ್ತ.**—(ಮೇಲಕ್ಕೆದ್ದು ಬಂಗಾರದ ಒರೆಯಲ್ಲಿರುವ ಕತ್ತಿಯನ್ನು ಒಪ್ಪಿಸಿ) ಒಪ್ಪಿಸಿಕೊಳ್ಳಬೇಕು ಮಹಾಪ್ರಭು! (ಕೊಡುವನು.)

**ರಾವಣ.**—(ಕತ್ತಿಯನ್ನು ಒರೆಯಿಂದ ಹಿರಿದು ಅದನ್ನು ದೃಷ್ಟಿಸಿ ನೋಡಿ ಸಂತೋಷಿಸಿ) ಸೊಗಸಾದ ಕತ್ತಿ. ಸೊಗಸಾದ ಕತ್ತಿ. ಲಂಕೆ ಯಲ್ಲೇ ಶ್ರೇಷ್ಠನಾದ ಕಲಾಕೋವಿದನು ನಿರ್ಮಿಸಿದ ಕತ್ತಿ. (ಮಹಾ ಕಾಯನ ಕಡೆಗೆ ನೋಡಿ) ನಾನು ಯುದ್ಧದಲ್ಲಿ ಸೋತಿದ್ದರೆ ನನಗಾಗು ತ್ತಿದ್ದ ಶಾಸ್ತಿಯನ್ನೇನೋ ವರ್ಣಿಸಿದೆ. ನನ್ನಿಂದ ನಿನಗೆ ದೊರೆಯಬಹು ದಾದ ಶಿಕ್ಷೆಯನ್ನು ಕುರಿತು ಯೋಚಿಸಿರುವೆಯೋ? (ಸ್ವಲ್ಪ ನಕ್ಕು) ರಾವಣನ ಚರ್ಮವನ್ನು ಸುಲಿಸುತ್ತಿದ್ದೆಯಲ್ಲವೆ?

**ಆರುಣಿ.**—ಭದ್ರಾಶ್ವ? ನಿಜ ಹೇಳು. ನೀನು ನಮ್ಮ ಬೀದಿಯ ಭದ್ರಾಶ್ವನೋ? ಇಲ್ಲವೆ.......ರಾವಣ........

**ಉಳಿದವರೆಲ್ಲರೂ.**—ಎಲ್ಲಿ? ಎಲ್ಲಿ? ರಾವಣ ಬಂದುಬಿಟ್ಟನೇ?
(ಭಯದಿಂದ ಓಡುವರು. ಆರುಣಿಯು ಅವರ ಹಿಂದೆ ಓಡಿ ಅವರನ್ನು ಕರೆದು ತರುವನು.)

**ಆರುಣಿ.**—ಭದ್ರಾಶ್ವ! ಧೈರ್ಯವಾಗಿರಬೇಕೆಂದು ನನಗೆ ಈಗ ತಾನೆ ಹೇಳಿದ ನೀನೇ ಹೀಗೆ ಓಡಿಬಿಡೋದೆ? ನಾನು ಕೇಳುತ್ತಿದ್ದುದು ನೀನೇ ಭದ್ರಾಶ್ವನೋ, ಇಲ್ಲವೇ ರಾವಣನು ಕಳುಹಿಸಿದ ಕಾಮರೂಪಿ ಯಾದ ಯಾವನಾದರೂ ರಾಕ್ಷಸನು ಭದ್ರಾಶ್ವನ ವೇಷದಿಂದ ಬಂದಿ ದ್ದಾನೋ ಅಂತ. ಅಷ್ಟರಲ್ಲೇ ಓಡಿಬಿಡೋದೆ, ನೀವು?

**ಭದ್ರಾಶ್ವ.**—ಭಯಪಟ್ಟವರು ಯಾರಯ್ಯ? ಸುಮ್ಮನೆ ಹಗ ರಣವೇಕೆಂತ ಓಡಿದೆವು. ಅಷ್ಟೆ. ನಿನ್ನ ಹಾಗೆ ನಾನು ಯಾರ ಮುಖ ವನ್ನಾದರೂ ಮುಟ್ಟಿ ನೋಡಿದೆನೆ? (ಆರುಣಿಯ ಹೊರತು ಉಳಿದವ ರೆಲ್ಲರೂ ನಗುವರು.)

**ಆರುಣಿ.**—ಭಯದ ನಡುವೆ ಈ ಬಿಂಕ ಬೇರೆ. (ನೇಪಥ್ಯದ ಕಡೆಗೆ ನೋಡಿ) ಅದೋ, ಅದೋ, ದೂರದಲ್ಲಿ ನಾರದರು ಬರುತ್ತಿರು ವರು. ಮಹೇಂದ್ರನು ಕೂಡ ಸೆರೆಸಿಕ್ಕಿ, ಅಮರಾವತಿಯು ಸೂರೆ ಯಾಗುತ್ತಿದೆ. ನಾರದ ಮಹರ್ಷಿಗಳೊಡನೆ ನಮ್ಮ ಸಂಕಟವನ್ನು ಹೇಳಿಕೊಂಡು ಅದರ ಪರಿಹಾರದ ಮಾರ್ಗವನ್ನು ಅವರಿಂದಲೇ ತಿಳಿದು ಕೊಳ್ಳೋಣ.

**ಚಿತ್ರರಥ.**—(ಮುಂದೆ ಬಂದು) ಆರುಣಿ! ಈ ಕೆಲಸವನ್ನು ಮಾಡುವವನು ನೀನಲ್ಲ, ನಾನು. ನೀನು ನನ್ನ ಚಾಕರನೆಂಬುದನ್ನು ಮರೆತಂತಿದೆ.

**ಆರುಣಿ.**—ಅಬ್ಬ! ಆಪತ್ತಿನ ಹಾಸು ನಾಲಗೆಯ ಮೇಲಿರುವಾಗಲೂ ಅಧಿಕಾರದ ಧೋರಣೆಯೆ? ಆ ಮಾತೆಲ್ಲಾ ಹಿಂದಕ್ಕೇ ಆಯಿತು. ಈಗ ಅಧಿಕಾರಿಯೂ ಇಲ್ಲ. ಚಾಕರನೂ ಇಲ್ಲ. ಅವರವರ ತಲೆಯನ್ನು ಅವರವರು ಉಳಿಸಿಕೊಂಡರೇ ಸಾಕಾಗಿದೆ. ಹುಸಿ ಬಿಂಕವೇಕೆ? ಈಗ ಎಲ್ಲರಿಗೂ ದಿಗಿಲು. ಎಲ್ಲಿ ನೋಡಿದರೂ ಅವಾಂತರ. ಯಾರ ಮುಖದಲ್ಲೂ ತೇಜಸ್ಸೇ ಇಲ್ಲ. (ನೇಪಥ್ಯದ ಕಡೆಗೆ ನೋಡಿ) ನಾರದ ಮಹರ್ಷಿಗಳು ಸಮೀಪಕ್ಕೇ ಬಂದುಬಿಟ್ಟರು. ಎಲ್ಲರೂ ದೂರ ಸರಿದು ನಿಲ್ಲೋಣ.

(ನಾರದ ಮಹರ್ಷಿಯು ಮಹತೀ ವೀಣೆಯನ್ನು ಬಾರಿಸುತ್ತ, ಭಕ್ತಿಪಾರವಶ್ಯದಿಂದ ತನ್ನನ್ನೇ ಮರೆತು ಭಗವನ್ನಾಮ ಸಂಕೀರ್ತನ ಮಾಡುವನು. ಅವನ ಗಾನವು ಮುಗಿಯುವ ವೇಳೆಗೆ ಅವರೆಲ್ಲರೂ ಮುಂದೆ ಬಂದು ವಂದಿಸುವರು.)

**ನಾರದ.**—ಶ್ರೇಯೋಸ್ತು. ಶ್ರೇಯೋಸ್ತು.

**ಚಿತ್ರರಥ.**—ಪೂಜ್ಯರೆ! ಇನ್ನು ನಮಗೆಲ್ಲಿ ಶ್ರೇಯಸ್ಸು? ತಾವೂ ಹೀಗೆ ಆಶೀರ್ವದಿಸಿ ನಮ್ಮ ಶೋಕ ಸಂತಾಪಗಳನ್ನು ಹೆಚ್ಚುಮಾಡಬಹುದೆ?

**ನಾರದ.**—ಶ್ರೇಯಸ್ಸಿನ ಬೀಜವು ಮೊಳೆತು ಮಹಾವೃಕ್ಷವಾಗುವುದು ಶೋಕ ಸಂತಾಪಗಳಿಂದ ತುಂಬಿದ ಹೃದಯದ ಫಲವತ್ತಾದ ನೆಲದಲ್ಲೇ. ಭಾವಶುದ್ಧಿಯೇ ಅದಕ್ಕೆ ಬೇಕಾದ ತಿಳಿನೀರು. ಭಗವದ್ಭಕ್ತಿಯೇ ಅದನ್ನು ಪರಿಪೋಷಿಸಿ ಬೆಳೆಯಿಸುವ, ಅದನ್ನು ಬ್ರಹ್ಮಾಂಡವ್ಯಾಪಿಯನ್ನಾಗಿ ಪರಿಣಾಮಗೊಳಿಸುವ, ತನಿ ಬೆಳಕು. ಹೀಗಿದ್ದೂ ಶೋಕ ಸಂತಾಪಗಳು ಸಂಭವಿಸಿರುವುದನ್ನೇ ಕಾರಣವಾಗಿಟ್ಟುಕೊಂಡು, ಶ್ರೇಯಸ್ಸಿಲ್ಲವೆಂದು ಭಾವಿಸುವುದೆ? ಅಮೃತ ಪಾನಮಾಡಿ ಅಮರರಾಗಿರುವ ನೀವು ಹೀಗೆ ಭಾವಿಸಬಹುದೆ?

**ಆರುಣಿ.**—ಪೂಜ್ಯರೆ! ನಮ್ಮ ಅಮರತ್ವವೇ ನಮಗೆ ಪ್ರಾಣ ಸಂಕಟವಾಗಿದೆ. ನಾವು ಸಾಯುವ ಹಾಗಿಲ್ಲ. ಏಟು ತಿನ್ನುವುದು ತಪ್ಪುವ ಹಾಗಿಲ್ಲ. ನಾವು ಅಮೃತಪಾನ ಮಾಡಿದ್ದೇ ಪ್ರಾಣಕ್ಕೆ ಬಂದಿದೆ.

**ನಾರದ.**—(ಸ್ವಲ್ಪ ನಕ್ಕು) ದೈವವಿಲಾಸ, ದೈವವಿಲಾಸ.

**ಚಿತ್ರರಥ.**—ಅಮರಾವತಿಯೇ ಒಡೆಯನಿಲ್ಲದ ಹಾಳು ಕೊಂಪೆಯಾಗಿದೆ. ನಾವು ರಾಕ್ಷಸರ ಬಾಧೆಯಿಂದ ತಲ್ಲಣಗೊಂಡು ದುಃಖಪಡುತ್ತಿದ್ದೇವೆ. ಪೂಜ್ಯರೆ! ತಾವು ಇದನ್ನು ಕಂಡೂ ಹೀಗೆ ನಗುವುದು ನ್ಯಾಯವೆ? ಇಂತಹ ದುಃಖವು ದೈವವಿಲಾಸವಾಗುವುದಾದರೆ, ಆ ದೈವವೇ ನಮಗೆ ಬೇಡ. ನಾವು ಸಂಕಟಪಡುತ್ತಿದ್ದೂ ತ್ರಿಮೂರ್ತಿಗಳೇನು ಮಾಡುತ್ತಿರುವರೋ ತಿಳಿಯದು. ಆತ್ಮೀಯರ ರಕ್ಷಣೆಯನ್ನು ಕೂಡ ತೊರೆದು, ದಿಕ್ಕೆಟ್ಟು ನಾವು ಓಡಿಬಂದಿದ್ದೇವೆ. ತಾವು ನಗುತ್ತಿದ್ದೀರಿ.

**ನಾರದ.**—ನೀವು ಸಂಕಟಪಡುತ್ತಿರುವುದಕ್ಕಾಗಿ ನನಗೆ ಅನುಕಂಪವುಂಟು. ಆದರೂ, ನಿಮ್ಮ ಈ ಬಗೆಯ ವರ್ತನೆಯನ್ನು ಕಂಡು ನನಗೆ ನಗುವೂ ಬರುವುದು. ನೀವು ನಿಮ್ಮ ಗೀರ್ವಾಣ ಸಂಸ್ಕೃತಿಯ ತೇಜಸ್ಸನ್ನು ಕಳೆದುಕೊಂಡಿರಿ. ಅದರಿಂದ ವಿಪತ್ತಿಗೆ ಗುರಿಯಾದಿರಿ. ಅಮರರಾಗಿದ್ದೂ ದೇವತ್ವವಿಲ್ಲದವರಾದಿರಿ. ಇದು ನಿಮ್ಮ ತಪ್ಪಲ್ಲ. ಸುಖದ ಸುಪ್ಪತ್ತಿಗೆಯೇ ಸರ್ವಸ್ವವೆಂದು ನಂಬಿದವರಿಗೆ ದುಃಖವೂ, ಪರಾಧೀನತೆಯೂ, ತಪ್ಪಲಾರವು.

**ಆರುಣಿ.**—ಪೂಜ್ಯರೆ! ತಾವೂ ಹೀಗೆ ರಾಕ್ಷಸ ಪಕ್ಷಪಾತಿಗಳಾಗಬಹುದೆ?

**ಚಿತ್ರರಥ.**—ದೇವರ್ಷಿಗಳಾಗಿದ್ದೂ ತಾವೇ ಹೀನ ಮರ್ತ್ಯರ ಕಡೆಗೆ ಸೇರಬಹುದೆ?

**ನಾರದ.**—ನಿಮ್ಮ ದೇವತ್ವವು ನಾಶವಾದುದಕ್ಕೆ ಇದೂ ಒಂದು ಗುರುತು. ಶಿವನನ್ನು ಒಲಿಸಿಕೊಂಡು ವರವನ್ನು ಪಡೆದಿರುವ ರಾವಣೇಶ್ವರನೇನು ಸಾಮಾನ್ಯನೆ? ಆತ್ಮತೇಜಸಿಲ್ಲದವನಿಗೆ ಶಿವನು ಒಲಿಯುವನೆ? ಆತ್ಮತೇಜಸ್ಸಿರುವವನು ಮರ್ತ್ಯನಾದರೂ, ದೇವತ್ವದ ನೆಲೆಯನ್ನರಿತವನೆನ್ನಲು ಅಡ್ಡಿಯುಂಟೆ?

**ಚಿತ್ರರಥ.**—ಹಾಗಾದರೆ ಅವನು ಸರ್ವಶ್ರೇಷ್ಠನೋ? ಅವನಿಗೆ ಚ್ಯುತಿಯೇ ಇಲ್ಲವೋ?

**ನಾರದ.**—ಅದು ಅವನ ಭಾಗ್ಯ ಪಜ್ಙ್ತಿಯ ಗತಿಗೆ ಅಧೀನ. ಅರಿ ವರ್ಗಗಳಿಗೆ ಅವನೇನಾದರೂ ಅಧೀನನಾಗಿ ಆತ್ಮಗ್ಲಾನಿಯನ್ನು ತಂದುಕೊಂಡರೆ, ಅವನ ವೈಭವವೂ ಮಣ್ಣುಪಾಲಾಗುವುದು. ಸದ್ಯದಲ್ಲೇನೋ ಅವನು ಭಕ್ತಾವತಂಸನಾಗಿದ್ದಾನೆ. ಆದರೆ ಕಾಲಗರ್ಭದಲ್ಲೇನಿರುವುದೋ ಅರಿತವರಾರು?

**ಚಿತ್ರರಥ.**—ಪೂಜ್ಯರೇ! ನಮ್ಮ ಅಪಚಾರವನ್ನು ಮನ್ನಿಸಿರಿ. ಮಹೇಂದ್ರನೇ ಸೆರೆ ಸಿಕ್ಕಿದ ಬಳಿಕ ನಮ್ಮ ಪಾಡೇನು? ಮುಂದೆ ನಮಗೆ ಗತಿಯೇನು?

**ನಾರದ.**—ಆತ್ಮ ಭರವಸೆಯೇ ಗತಿ. ಆತ್ಮಾವಲಂಬನವೇ ಗತಿ. ಆ ಗುಣಗಳಿಲ್ಲದ ಬಳಿಕ ಉಳಿದುದು ಎಷ್ಟಿದ್ದರೂ ವ್ಯರ್ಥ. ನೀವುಗಳು ಆತ್ಮೀಯರೆಂದು ನಂಬಿದ್ದವರೆಲ್ಲರನ್ನೂ ತೊರೆದು ಹೀಗೆ ಓಡಿಬಂದುದು ಯುಕ್ತವೆ? ಅಪ್ಸರೆಯರೇ ಮುಂತಾದ ಅಬಲೆಯರನ್ನು ರಕ್ಷಿಸುವವರಾರು? ಮಹೇಂದ್ರನನ್ನು ಸೆರೆಯಿಂದ ಬಿಡಿಸಿಕೊಳ್ಳಲು ಪ್ರಯತ್ನಮಾಡದೆ, ನೀವು ಹೀಗೆ ಕಳೆಗುಂದಬಹುದೆ?

**ಚಿತ್ರರಥ.**—ಪೂಜ್ಯರೇ? ತಾವು ಹೇಳುವುದು ಯುಕ್ತವಾಗಿದೆ. ನಾವೆಲ್ಲರೂ ಮತ್ತೆ ಯುದ್ಧಮಾಡುವಂತೆ ಹುರಿದುಂಬಿಸಿದುದಕ್ಕಾಗಿ

ಕೃತಜ್ಞರಾಗಿದ್ದೇವೆ. ಆದರೂ ಹಾಳು ರಾಕ್ಷಸರನ್ನು ಕಂಡು ಹೆದರ ಬೇಕಾಗಿ ಬಂದಿದೆ.

(ಅನೇಕರು ರಾಕ್ಷಸರು ಪ್ರವೇಶಿಸಿ "ಹಾಳು ರಾಕ್ಷಸರೆಂದು ಬಯ್ಯುತ್ತೀರಾ?" ಎಂದು ಹೇಳುತ್ತ ಅಮರರನ್ನು ಆಕ್ರಮಣಮಾಡಿ ಪ್ರಹರಿಸುವರು. ನಾರದನು ಅವರ ಕಡೆಗೆ ನೋಡುವನು. ಆತನನ್ನು ಕಂಡು ಅವರು ಅಪ್ರತಿಭರಾಗಿ ನಿಲ್ಲುವರು.)

**ನಾರದ.**—ವೀರರೇ! ಇದೇನಿದು ಈ ಅತ್ಯಾಚಾರ! ರಾವಣೇಶ್ವರ ಭೂಪಾಲನು ಈ ವಾರ್ತೆಯನ್ನು ಕೇಳಿ ಏನೆಂದಾನು? ಮಹಾಕಾಯ ಮಹಾರಾಜನಲ್ಲಿ ಅವನು ವರ್ತಿಸಿದ ಬಗೆಯು ಇಷ್ಟು ಬೇಗ ಮರೆತುಹೋಯಿತೆ?

**ರಾಕ್ಷಸ ವೀರರು.**—ಕ್ಷಮಿಸಬೇಕು. ಸರ್ವಾಪರಾಧ.

**ನಾರದ.**—ಪೌರುಷಕ್ಕೆ ವಿನಯವೇ ಭೂಷಣಪ್ರಾಯವೆನಿಸುವುದು. ವಿಜೇತರು ವಿಜಿತರನ್ನು ಪ್ರೀತಿಕರುಣೆಗಳಿಂದ ಕಂಡು ಆ ಮೂಲಕ ತಮ್ಮ ದೊಡ್ಡತನವನ್ನು ತೋರ್ಪಡಿಸಿಕೊಳ್ಳಬೇಕು. ದಯೆಯಿಂದ ಅವರ ಹೃದಯವನ್ನು ಸ್ವಾಧೀನಪಡಿಸಿಕೊಳ್ಳಬೇಕು. ನಿಮಗೆ ಶುಭವುಂಟಾಗಲಿ. (ರಾಕ್ಷಸವೀರರು ನಾರದನನ್ನು ವಂದಿಸಿ ಹೊರಟುಹೋಗುವರು) ಅಮರರೆ! ಮಹೇಂದ್ರನನ್ನು ಸೆರೆಯಿಂದ ಬಿಡಿಸುವ ಪ್ರಯತ್ನಮಾಡಿ. (ಅವರೂ ವಂದಿಸಿ ಹೊರಟುಹೋಗುವರು. ಬಳಿಕ ನಾರದನೂ ಹಾಡಿಕೊಂಡು ಹೊರಟುಹೋಗುವನು.)

---

## ದೃಶ್ಯ ೩

**[ಮಂಡೋದರಿಯ ಅಂತಃಪುರೋದ್ಯಾನ. ಅದನ್ನು ಮನೋಹರವಾಗಿ ಅಲಂಕರಿಸಿ ಪರಿಜನ ಪರಿವೇಷ್ಟಿತಳಾಗಿ, ಮಂಡೋದರಿಯು ರಾವಣನ ಆಗ**

ಮನವನ್ನು ನಿರೀಕ್ಷಿಸುತ್ತ ಸುಖಾಸನದಲ್ಲಿ ಕುಳಿತಿರುವಳು. ಸಖಿಯರು ಹಾಡುತ್ತಿರುವರು. ಸುವರ್ಣರಚಿತವಾದ ಭದ್ರಾಸನವೂ, ಇತರ ಸಾಮಗ್ರಿ ಗಳೂ ಸಿದ್ಧವಾಗಿರುವುವು. ಇಂದ್ರನೊಡನೆ ಯುದ್ಧಮಾಡಿ ಜಯ ಶಾಲಿಯಾದ ರಾವಣನು ಹಾಡು ಮುಗಿಯುವ ವೇಳೆಗೆ ಪ್ರವೇಶಿಸುವನು. ಚೇಟಿಯರು ತಲೆಬಾಗಿ ವಂದಿಸಿ ಹೊರಟುಹೋಗುವರು. ಸಮಯ: ಸಾಯಂಕಾಲ.]

**ಮಂಡೋದರಿ.**—(ಥಿಗ್ಗನೆದ್ದು) ಆರ್ಯಪುತ್ರನಿಗೆ ಜಯ ವಾಗಲಿ! (ನಮಸ್ಕರಿಸುವಳು.)

**ರಾವಣ.**—(ಆದರದಿಂದ ಮಂಡೋದರಿಯನ್ನು ಮೇಲಕ್ಕೆತ್ತಿ, ಪ್ರೀತಿ ಯಿಂದ ಅವಳ ಕೈಯನ್ನು ಹಿಡಿದು) ಭದ್ರೆ! ನೀನು ಈ ರೀತಿ ಪದೇ ಪದೇ ಜಯವನ್ನು ಕೋರುತ್ತಲೇ ಇರು. ನಾನು ಜಯಲಾಭವನ್ನು ಪಡೆದು ಹಿಗ್ಗುತ್ತಲೇ ಇರುವೆನು.

**ಮಂಡೋದರಿ.**—(ಮಂದಹಾಸದಿಂದ ಕೂಡಿ ಹುಸಿ ಬಿಂಕವನ್ನು ತೋರ್ಪಡಿಸುತ್ತ) ಪ್ರಿಯತಮ! ಸಂತೋಷವು ನಿನಗೊಬ್ಬನಿಗೇ ಅಲ್ಲ. ನಿನ್ನ ಯಶಸ್ಸನ್ನು ನೋಡಿ ನೋಡಿ ಆನಂದದಿಂದ ಮೈ ಮರೆಯುವವರೂ ಇದ್ದಾರೆ.

**ರಾವಣ.**—(ಸ್ವಲ್ಪ ನಕ್ಕು) ಇದಕ್ಕೋಸ್ಕರವೇ ನಾನು ನಿನ್ನನ್ನು ಪ್ರಿಯ ಭಾಷಿಣಿಯೆಂದು ಕರೆಯುವುದು! ನೀನು ನನ್ನ ಸುಮ್ಮಾನದ ಮುದ್ದು ಗಿಳಿ. ರಾವಣನು ತನ್ನ ಅರ್ಧ ದೇಹದ ವೈಭವ ವಿಲಾಸಗಳ ಆನಂದವು ಉಳಿದ ಅರ್ಧ ದೇಹಕ್ಕೂ ಉಂಟೆಂಬುದನ್ನು ಕೂಡ ಅರಿ ಯದ ಶುಂಠನೆಂದು ಭಾವಿಸಿದೆಯಾ?

**ಮಂಡೋದರಿ.**—ಅದೇನೋ ತಿಳಿಯದು. ಪ್ರಿಯನೆದುರಿಗೆ ನಿಂತಾಗ ತನಗೂ ಪ್ರತ್ಯೇಕವಾಗಿ ದೇಹವೊಂದಿದೆಯೆಂಬ ಪ್ರಜ್ಞೆಯುಳ್ಳ ವಳು ಅದನ್ನು ಹೇಳಲು ಸಮರ್ಥಳು.

**ರಾವಣ.**—ಅನೇಕ ವೇಳೆ ಪಗಡೆಯಲ್ಲಿ ಸೋಲಿಸಿದ್ದೆ. ಇಂದು ನನ್ನನ್ನು ಮಾತಿನಲ್ಲೂ ಸೋಲಿಸಿದೆ.

**ಮಂಡೋದರಿ.**—ಪ್ರಾಣೇಶ್ವರ! ನಿನ್ನ ಯಶಸ್ಸು ಶರತ್ಕಾಲದ ಹುಣ್ಣಿಮೆಯ ಬೆಳದಿಂಗಳಿನಂತೆ ಎಲ್ಲೆಲ್ಲಿಯೂ ಬೆಳಗುತ್ತಿರುವುದನ್ನು ನೋಡಿ ನೋಡಿ ಆನಂದಿಸುತ್ತಿರುವೆನು. ಆದರೂ, ಪರಮೇಶ್ವರನ ವರದಂತೆ ಯುದ್ಧಕಾಲದಲ್ಲಿ ನಿನಗೆ ಹತ್ತು ತಲೆಗಳೂ, ಇಪ್ಪತ್ತು ಭುಜಗಳೂ ಒದಗುವ ಅಚ್ಚರಿಯ ನೋಟವನ್ನು ನೋಡಲು ಬಹಳ ಆಸೆ. ಅದು ಮಾತ್ರ ಇನ್ನೂ ಈಡೇರಲಿಲ್ಲ. ನಾನು ಅಮರಾವತಿಗೆ ಬಂದಿದ್ದರೆ ಎಷ್ಟು ಚೆನ್ನಾಗಿತ್ತು! ಹತ್ತು ತಲೆಗಳಿಂದಲೂ, ಇಪ್ಪತ್ತು ಕೈಗಳಿಂದಲೂ ವೀರಶ್ರೀಯನ್ನು ಆರಾಧಿಸುತ್ತ ಸಮರ ಭೂಮಿಯಲ್ಲಿ ಮೆರೆಯುವ ನಿನ್ನ ಮೋಹನ ರೂಪವನ್ನು ನೋಡಿ ನಾನು ನಲಿಯುತ್ತಿದ್ದೆ. (ಉಕ್ಕಿ ಬರುತ್ತಿರುವ ಉಲ್ಲಾಸಭರದಲ್ಲಿ ಅರ್ಧ ನಿಮಿಾಲಿತ ನೇತ್ರೆಯಾಗಿ, ರಾವಣನ ಎಡ ಭುಜದ ಮೇಲೆ ಕೈಹಾಕಿ) ಒಂದು ತಲೆಯಿರುವಾಗಲೇ ಇಷ್ಟು ಸುಂದರ. ಆಗ ಕೇಳಬೇಕೆ? ಅಬ್ಬ! ಎಂತಹ ಸೊಗಸಿನ ನೋಟ! ಎಂತಹ ಸೊಗಸಿನ ನೋಟ!

**ರಾವಣ.**—(ಮಂಡೋದರಿಯ ಮುಂಗುರುಳನ್ನು ನೇವರಿಸಿ.) ವಾಣಿಯಾಡುವ ನನ್ನ ವೀಣೆಯೇ! ಗಾನರಸದಿಂದ ನನ್ನನ್ನು ತಣಿಸು! ತಣಿಸಿ ತಣಿಸಿ ಉಲ್ಲಾಸ ಪಡಿಸು! ದೇವಿ! ಎಲ್ಲಿ ನೋಡಿದರೂ ನಿನ್ನ ಯಶಸ್ಸೇ ಕಂಗೊಳಿಸುತ್ತಿದೆ. ನೀನು ದಿನ ದಿನವೂ ಕೀರ್ತಿ ಸೋಪಾನವನ್ನೇರುತ್ತಿರುವೆ.

**ಮಂಡೋದರಿ.**—ಆರ್ಯಪುತ್ರ! ಪ್ರೇಮದೊಡನೆ ಅತಿಶಯೋಕ್ತಿಯೂ ಸೇರಿದಮೇಲೆ ಕೇಳಬೇಕೆ? ಕಣ್ಣಿನೊಡನೆ ಮನಸ್ಸಿಗೂ ಮೋಹದ ಮರೆ. ಕಣಿಗಲು ಹೂವಿನಲ್ಲಿಯೂ ಮಂದಾರ ಪುಷ್ಪದ

ಭಾವನೆ. ಆರ್ಯಪುತ್ರ! ನಿನಗೆ ಸಲ್ಲಬೇಕಾದುದನ್ನು ನನಗೆ ಹೊಂದಿಸಿ ಆನಂದಿಸುತ್ತಿರುವೆ.

**ರಾವಣ.**—ಇಲ್ಲ, ಹಾಗೆಂದಿಗೂ ಇಲ್ಲ; ರಾವಣನ ಪತ್ನಿಯೆಂದು ಮಂಡೋದರಿಗೆ ಮನ್ನಣೆಯು ಸಲ್ಲುತ್ತಿದ್ದ ಕಾಲವು ಎಂದೋ ಕಳೆದು ಹೋಯಿತು. ಮಂಡೋದರೀ ದೇವಿಯ ಪತಿಯೆಂದು ರಾವಣನ ಗೌರವವು ಹೆಚ್ಚುವ ಕಾಲವು ಈಗ ಬಂದಿದೆ. ಅದೇ ನನಗೊಂದು ಸಂತೋಷ. ಈ ವಿಚಾರವು ಹಾಗಿರಲಿ. ಇದೇನು, ಇಂದಿನ ಈ ವೈಭವ?

**ಮಂಡೋದರಿ.**—ಸ್ವರ್ಗಲೋಕದವರಿಗಿಂತಲೂ ಆರ್ಯಪುತ್ರನು ಅಗ್ಗಳೆಯನೆಂದು ಹೊಗಳಿ ಮುತ್ತಿನಾರತಿಯ ಕಾಣಿಕೆಯನ್ನೊಪ್ಪಿಸುವುದಕ್ಕಾಗಿ. ನನ್ನ ಸಂತೋಷಕ್ಕೆ ಪತಿಸೇವೆಯಿಂದ ಅಮೃತ ಸೇಚನ ಮಾಡುವುದಕ್ಕಾಗಿ.

**ರಾವಣ.**—ಜಯಾಪಜಯಗಳ ವಾರ್ತೆಯು ಬರುವುದಕ್ಕೆ ಮೊದಲೇ ಉತ್ಸವಕ್ಕೆ ಅಣಿಮಾಡುವುದೆ?

**ಮಂಡೋದರಿ.**—ಗಂಡುಡೆಯುಟ್ಟು ನಿಂದವರಲ್ಲಿ ರಾವಣನನ್ನು ಸೋಲಿಸುವವರೂ ಬ್ರಹ್ಮಸೃಷ್ಟಿಯಲ್ಲಿದ್ದಾರೆಯೆ?

**ಚೇಟಿ.**—(ಪ್ರವೇಶಿಸಿ) ಜಯವಾಗಲಿ ಮಹಾರಾಜನಿಗೆ. ನಾರದ ಮಹರ್ಷಿಗಳು ಬಂದಿದ್ದಾರೆ.

**ರಾವಣ.**—(ಮಂಡೋದರಿಯ ಕಡೆಗೆ ನೋಡಿ) ದೇವಿ! ಪೂಜ್ಯರನ್ನು ಕರೆದು ತರುವೆನು. ಪೂಜಾಸಾಮಗ್ರಿಗಳನ್ನು ಸಿದ್ಧಗೊಳಿಸು.

(ಹೊರಡುವನು.)

**ಚೇಟಿ.**—(ಮುಂದೆ ನಡೆಯುತ್ತ) ಮಹಾರಾಜನು ಹೀಗೆ ದಯ ಮಾಡಬೇಕು. (ಅವರೀರ್ವರೂ ಸ್ವಲ್ಪ ಮುಂದೆ ಹೋಗುವರು. ಅಷ್ಟರಲ್ಲಿ

ನಾರದನು ಪ್ರವೇಶಿಸುವನು. ಮಂಡೋದರಿಯು ಪೂಜಾಸಾಮಗ್ರಿಗಳನ್ನು ತರಲು ಒಳಕ್ಕೆ ಹೋಗಿ ಅವುಗಳೊಡನೆ ಬರುವಳು.)

(ನಾರದನು ಆನಂದಪರವಶನಾಗಿ ಹಾಡುತ್ತ ಪ್ರವೇಶಿಸುವನು. ರಾವಣನು ನಾರದನನ್ನು ಭಕ್ತಿ ಗೌರವಗಳಿಂದ ಕರೆದು ತಂದು ಭದ್ರಾಸನದಲ್ಲಿ ಕುಳ್ಳಿರಿಸಿ, ಅರ್ಘ್ಯ ಪಾದ್ಯಾದಿಗಳಿಂದ ಸತ್ಕರಿಸುವನು. ದಂಪತಿಗಳೀರ್ವರೂ ನಾರದನಿಗೆ ನಮಸ್ಕರಿಸುವರು.)

**ನಾರದ.**—ಶ್ರೀಮನ್ನಾರಾಯಣನು ನಿಮ್ಮೀರ್ವರಿಗೂ ಮಂಗಳ ವನ್ನುಂಟುಮಾಡಲಿ!

**ರಾವಣ.**—ಪೂಜ್ಯರೇ! ಹಿರಿಯರಲ್ಲಿ ಮರುಮಾತನಾಡುವುದು ಮಹಾಪರಾಧ. ಆದರೂ ಮನ್ನಿಸಿ ಲಾಲಿಸಬೇಕು. ತಾನೇ ಬಲಿಯನ್ನು ಬೇಡಿದ ನಾರಾಯಣನು ಇತರರಿಗೇನನ್ನು ಭಿಕ್ಷವೀಯುವನು?

**ನಾರದ.**—ಬಲಿಯನ್ನು ಪಾತಾಳಕ್ಕೆ ತುಳಿದು ಧರ್ಮಸಂಸ್ಥಾಪನೆ ಮಾಡುವುದಕ್ಕಾಗಿ ಆತನು ಹಾಗೆ ಮಾಡಿದನು. ಭಕ್ತಪರಾಧೀನನಾದ ಮಹಾವಿಷ್ಣುವು ಬಲಿಯ ಬಾಗಿಲನ್ನು ಕಾಯುತ್ತ ಇಂದಿಗೂ ದೂತ ನಾಗಿರುವನು. ಭಕ್ತನಾದ ಬಲಿಗೆ ಚಿರಜೀವಿಪಟ್ಟವನ್ನೂ ಅನುಗ್ರಹಿ ಸಿರುವನು.

**ರಾವಣ.**—ಕೇವಲ ಶೌರ್ಯ ಪ್ರದರ್ಶನದಿಂದಲೇ ವನ ಮಾಲಿಯ ಬಲಿಯನ್ನು ಸೋಲಿಸಿದ್ದರೆ, ಯಾರೂ ಆಕ್ಷೇಪಿಸುವಂತಿರಲಿಲ್ಲ. ಮೋಸದ ಮೂಟೆಯಿಂದ ಸೋಲು. ಆ ಸೋಲಿನ ಹೊರೆಯನ್ನು ನಿರಂತರವೂ ಹೊತ್ತಿರಲು ಚಿರಜೀವಿಪಟ್ಟವೆಂಬ ಸುವರ್ಣ ಶೃಂಖಲೆ. ಇಷ್ಟಕ್ಕೂ ಭಕ್ತನನ್ನೇ ತುಳಿದವನಲ್ಲಿ ನಂಬಿಕೆಯನ್ನಿಡುವ ಬಗೆ ಹೇಗೆ?

**ನಾರದ.**—ರಾವಣೇಶ್ವರ ಭೂಪಾಲ! ಆಗಿನ ಸನ್ನಿವೇಶಗಳೇ ಬೇರೆ. ಅಂದು ಒದಗಿದ್ದ ಸ್ಥಿತಿಯೇ ಬೇರೆ. ನಿನ್ನ ಸಹೋದರನಾದ ವಿಭೀಷಣನೇ ವಿಷ್ಣುಭಕ್ತನಾಗಿರಲು ಅವಕಾಶವನ್ನಿತ್ತಿರುವ ನೀನು,

ನಾರಾಯಣನಲ್ಲಿ ವೈರಬುದ್ಧಿಯನ್ನು ಮಾಡಲೇತಕ್ಕೆ? ಸರ್ವಸಹಿಷ್ಣು ವಾಗಿ ಆದರ್ಶ ಸಮ್ರಾಟನೆಂಬ ಖ್ಯಾತಿಯನ್ನು ಮೂರು ಲೋಕ ಗಳಲ್ಲಿಯೂ ಸ್ಥಾಪಿಸಿ, ಮಹೇಂದ್ರನನ್ನು ಕೂಡ ಗೆದ್ದು ಬಂದಿರುವ ನೀನು ಲೇಶಮಾತ್ರವೂ ಹೇಯಭಾವನೆಗಳಿಗೆ ಅವಕಾಶ ಕೊಡಕೂಡದು. ಹರಿಹರರಿಬ್ಬರಲ್ಲೂ ಭಕ್ತಿಯನ್ನಿಟ್ಟು ಆರಾಧಿಸುವುದೇ ಪೂರ್ಣ ವಿವೇಕ. ತ್ರಿಮೂರ್ತಿಗಳೆಲ್ಲರೂ ಒಂದೇ. ಪರಬ್ರಹ್ಮನ ಸಗುಣವಾದ ವ್ಯಕ್ತರೂಪವೇ ತ್ರಿಮೂರ್ತಿ ಸ್ವರೂಪ. ಧರ್ಮಜ್ಞನೂ, ಧರ್ಮನಿರ ತನೂ, ವೀರಾಗ್ರೇಸರನೂ ಆದ ನಿನಗೆ, ನಾನು ಹೇಳತಕ್ಕುದು ತಾನೇ ಏನಿದೆ?

**ರಾವಣ.**—ತಮ್ಮ ಉಪದೇಶದಿಂದ ಅನುಗ್ರಹೀತನಾದೆನು. ಪೂಜ್ಯರೇ! ನಾರಾಯಣನಲ್ಲಿ ನನಗೆ ದ್ವೇಷವಿಲ್ಲ. ಆದರೂ ಪರಮೇಶ್ವರ ನಲ್ಲಿರುವಂತೆ ಆತನಲ್ಲಿ ನನಗೆ ಭಕ್ತಿಯಿಲ್ಲ.

**ನಾರದ.**—ಭಗವಂತನನ್ನು ಯಾವ ನಾಮರೂಪಗಳಿಂದ ಬೇಕಾ ದರೂ ಆರಾಧಿಸಬಹುದು. ಮಹಿಳಾಮಣಿಯಾದ ಮಂಡೋದರೀ ದೇವಿಯ ಪಾತಿವ್ರತ್ಯಕ್ಕೆ ಮೆಚ್ಚಿ ಲಕ್ಷ್ಮೀನಾರಾಯಣರು ಈ ಚಕ್ರಾಯುಧ ವನ್ನು ಕಳುಹಿಸಿದ್ದಾರೆ. (ದಿವ್ಯ ತೇಜಸ್ಸಿನಿಂದ ಪ್ರಜ್ವಲಿಸುತ್ತ ಚಕ್ರಾ ಯುಧವು ಬರುವುದು.) ರಾವಣೇಂದ್ರ! ಮಂಡೋದರೀ ದೇವಿಯು ಈ ಮೆಚ್ಚನ್ನು ಸ್ವೀಕರಿಸಲು ನಿನ್ನ ಅಭ್ಯಂತರವಿಲ್ಲವಷ್ಟೆ?

**ರಾವಣ.**—(ಸ್ವಗತ) ಇದರಲ್ಲಿ ಏನು ಮೋಸವೋ! ಇದಾವ ಭೇದೋಪಾಯದ ಮೊನೆಯೋ! ಮಹೇಶ್ವರನ ಅನುಗ್ರಹದ ಮುಂದೆ —ನನ್ನ ಪ್ರತಾಪಾನಲ ಜ್ವಾಲೆಯ ಮುಂದೆ—ವಿಷ್ಣುವಿನ ಮಾಯಾಜಾಲ ಗಳು ನಿಲ್ಲಬಲ್ಲುವೆ? ಇರಲಿ. (ಪ್ರಕಾಶ) ಪೂಜ್ಯರೆ! ಆಗಬಹುದು, ಸಂತೋಷ. (ಪ್ರೇಮದೃಷ್ಟಿಯಿಂದ ಮಂಡೋದರಿಯ ಕಡೆಗೆ ನೋಡುವನು.)

**ಮಂಡೋದರಿ.**—(ಕೈಮುಗಿದು ಚಕ್ರಾಯುಧವನ್ನು ಮುಟ್ಟಿ) ಪೂಜ್ಯರ ಅನುಗ್ರಹ. (ನಮಸ್ಕರಿಸುವಳು.)

**ನಾರದ.**—ವೀರಪತ್ನಿಯೆನಿಸಿರುವ ನೀನು, ವೀರಮಾತೆಯಾಗಿಯೂ ಪ್ರಖ್ಯಾತಳಾಗು. ಈ ಆಯುಧವು ಮಹಾವಿಷ್ಣುವಿನ ಹಸ್ತದಲ್ಲಿರುವ ಸುದರ್ಶನಕ್ಕೆ ಸಮವಾದುದು. ಇದು ಲಂಕಾನಗರಿಯ ಸುತ್ತಲೂ ಅಹರ್ನಿಶಿಯಲ್ಲಿಯೂ ಸುತ್ತುತ್ತಿರಬೇಕೆಂದೂ, ದೈವಭಕ್ತರೂ, ಸುಚರಿತರೂ ಹೊರತು ಮತ್ತಾವ ಪರಕೀಯರಿಗೂ ಪುರಪ್ರವೇಶಕ್ಕೆ ಅವಕಾಶಕೊಡದೆ ನಿನ್ನ ಆಜ್ಞೆಯನ್ನು ಅನುವರ್ತಿಸುತ್ತ, ನೀನು ಕೋರಿದಂತೆ ಶತ್ರುಸಂಹಾರ ಮಾಡಬೇಕೆಂದೂ, ಮಹಾವಿಷ್ಣುವು ಈ ದಿವ್ಯಾಯುಧಕ್ಕೆ ಆಜ್ಞಾಪಿಸಿದ್ದಾನೆ. ನಿನ್ನ ಸತ್ಕೀರ್ತಿಯು ಎಲ್ಲೆಲ್ಲಿಯೂ ಹಬ್ಬಿದೆ. ಪ್ರಜೆಗಳಿಗೆ ನೀನೇ ಮಾತೆಯಾಗಿರುವೆ.

**ಮಂಡೋದರಿ.**—ಪೂಜ್ಯರೆ! ತಾವೇ ಹೀಗೆ ಅತಿಶಯೋಕ್ತಿಗೆ ಹೊರಟರೆ ನನ್ನ ದೋಷಗಳನ್ನು ತೋರಿಸಿಕೊಟ್ಟು ಬುದ್ಧಿ ಹೇಳುವವರು ಯಾರು?

**ನಾರದ.**—ಈ ವಿನಯವೇ ನಿನಗೆ ದೊಡ್ಡ ಅಲಂಕಾರ. ಸೌಂದರ್ಯ ರಾಶಿಯರಾಗಿ ಸದ್ಗುಣ ಮಂಡಿತೆಯರಾಗಿರುವ ಕುಲವಧುಗಳಲ್ಲಿ, ಈ ಜಗತ್ತಿನಲ್ಲೇ ಸರ್ವಶ್ರೇಷ್ಠರೆನಿಸಿರುವವರು ಇಬ್ಬರು. ಒಬ್ಬಳು ಸೀತಾದೇವಿ. ಇನ್ನೊಬ್ಬಳು............ಮಂಡೋದರೀ ದೇವಿ!

**ರಾವಣ.**—(ಸ್ವಗತ) ಸೀತಾದೇವಿಯ ಸೌಂದರ್ಯವಾರ್ತೆ! (ಪ್ರಕಾಶ) ಪೂಜ್ಯರ ಆಶೀರ್ವಾದ ಮಹಿಮೆ.

**ನಾರದ.**—ರಾವಣೇಶ್ವರ ಭೂಪಾಲ! ಇನ್ನು ನಾನು ಹೊರಡುವೆನು.

(ರಾವಣ ಮಂಡೋದರಿಯರು ನಮಿಸುವರು. ರಾವಣನು ಸ್ವಲ್ಪ ಮುಂದೆ ಬಂದು ನಾರದನನ್ನು ಬೀಳ್ಕೊಡುವನು. ನಾರದನು ಹೊರಟು ಹೋಗುವನು. ಮಂಡೋದರಿಯು ಭದ್ರಾಸನದ ಬಳಿಗೆ ಹೋಗಿ ಏನನ್ನೋ ಹುಡುಕುವಂತೆ ಅಭಿನಯಿಸುವಳು.)

**ಮಂಡೋದರಿ.**—(ಮಲ್ಲಿಕಾ ಮಾಲೆಯನ್ನು ಹಿಡಿದು ಸಂಭ್ರಮ ದಿಂದ ರಾವಣನ ಬಳಿಗೆ ಬಂದು) ಪ್ರಾಣೇಶ್ವರ! ಈ ಮಾಲೆಯನ್ನು ನೋಡು! ಇದನ್ನು ಕಟ್ಟಿದವರಾರು, ಹೇಳಬಲ್ಲೆಯಾ?

**ರಾವಣ.**—ಪುಷ್ಪಮಾಲಿಕೆಗೆ ನಾಲಗೆ ಇದ್ದರೆ ಅದೇ ಹೇಳು ತ್ತಿದ್ದಿತು.

**ಮಂಡೋದರಿ.**—ಏನೆಂದು?

**ರಾವಣ.**—ಏನೆಂದು! ಮಂಡೋದರಿಯೆಂದು! ಇಷ್ಟು ಸೊಗ ಸಾಗಿ ಪುಷ್ಪಮಾಲಿಕೆಯನ್ನು ಗುಂಫನ ಮಾಡಬೇಕಾದರೆ ಮತ್ತಾರಿಗೆ ಸಾಧ್ಯ? ಇದನ್ನು ದೇವರ್ಷಿ ನಾರದರಿಗೆ ಅರ್ಪಿಸಬೇಕಾಗಿದ್ದಿತು.

**ಮಂಡೋದರಿ.**—ಇದು ದೇವರಿಗೋಸ್ಕರ ಕಟ್ಟಿದ ಮಾಲೆ. ನನಗೆ ದೇವರಿಗಿಂತ ನಾರದರು ಹೆಚ್ಚಲ್ಲ.

**ರಾವಣ.**—ಆಗಲಿ. ನಾವೀರ್ವರೂ ಅದನ್ನು ದೇವರಿಗೆ ಸಮ ರ್ಪಿಸೋಣ.

**ಮಂಡೋದರಿ.**—ಪ್ರಾಣೇಶ್ವರ! ಇದರಲ್ಲಿ ನಿನಗೆ ಭಾಗವು ಸಲ್ಲದು. ಈ ಮಾಲಿಕೆಯು ನನ್ನ ದೇವರಿಗೆ ನನ್ನೊಬ್ಬಳಿಂದಲೇ ಸಮ ರ್ಪಣೆಯಾಗಬೇಕು. ದೇವರು ಈ ವಿಜಯ ಮಾಲಿಕೆಯನ್ನು ಧರಿಸ ಬೇಕು.

(ಮಾಲೆಯನ್ನು ರಾವಣನ ಕೊರಳಿಗೆ ಹಾಕಿ, ಆನಂದವನ್ನು ಸೂಸಿ, ಮತ್ತೆ ಭದ್ರಾಸನದ ಬಳಿಗೆ ಹೋಗಿ ಪಚ್ಚೆಯ ಲಿಂಗವನ್ನು ತರುವಳು.)

**ಮಂಡೋದರಿ.**—(ರಾವಣನ ಬಳಿಗೆ ಬಂದು) ಈ ಪಚ್ಚೆಯ ಲಿಂಗವನ್ನು ಕೈಗಾಣಿಕೆಯಾಗಿ ಒಪ್ಪಿಸಿಕೊಳ್ಳಬೇಕು. ಪ್ರಾಣೇಶ್ವರನ ದಿವ್ಯ ಹಸ್ತದಿಂದ ಈ ದೇವನಿಗೂ ಪ್ರತಿದಿನವೂ ಪೂಜೆಯು ಸಲ್ಲಬೇಕು. (ಮುಗುಳುನಗೆಯನ್ನು ಸೂಸಿ) ಆರ್ಯಪುತ್ರನ ದಿಗ್ವಿಜಯಕ್ಕಾಗಿ ಹರ್ಷಿಸಿ, ಮಂಡೋದರಿಯು ಪ್ರೀತಿಯಿಂದ ಸಮರ್ಪಿಸಿದ ಮೆಚ್ಚು. (ಪಚ್ಚೆಯ ಲಿಂಗವನ್ನಿತ್ತು ನಮಸ್ಕರಿಸುವಳು.)

**ರಾವಣ.**—(ಮಂಡೋದರಿಯು ನಮಸ್ಕರಿಸುತ್ತಿರುವಾಗ ಅವಳಿಗೆ ಗೋಚರವಾಗದ ರೀತಿಯಲ್ಲಿ ಹೃದಯ ಯಾತನೆಯನ್ನು ಅಭಿನಯಿಸಿ, ಅವಳು ತನ್ನ ತಲೆಯನ್ನೆತ್ತಿದೊಡನೆಯೇ ಮುಖ ಮುದ್ರೆಯನ್ನು ಮಾರ್ಪಡಿಸಿ ಸಂತೋಷವನ್ನು ಸೂಚಿಸುವಂತೆ ನಟಿಸುತ್ತ) ಎಂತಹ ಅಮೋಘವಾದ ಮೆಚ್ಚು! ದೇವಿ! ಇದೇನು ಇಂದಿನ ಈ ಸಂಭ್ರಮ? ನಿನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊ. ಆಗತಾನೆ ಅರಳಿದ ತಾವರೆಗೂ ನಿನ್ನ ಮುಖ ದಷ್ಟು ನವ್ಯತೆಯೂ ಆನಂದಾನುಭವವೂ ಲಭಿಸವು.

**ಮಂಡೋದರಿ.**—ಆರ್ಯಪುತ್ರ! ಸ್ಫಟಿಕಶಿಲೆಯೂ ವಜ್ರದಂತೆ ತೋರುವುದು ಪ್ರಕಾಶದ ಮಹಿಮೆಯಲ್ಲವೆ? ಎಷ್ಟು ಪುಣ್ಯವತಿಯೋ ನಾನು!...........ಪ್ರಾಣೇಶ್ವರನು...........ಅನ್ಯಥಾ ಭಾವಿಸದೆ ಸುಪ್ರೀತನಾಗುವುದಾದರೆ........ನನ್ನದೊಂದು ಪ್ರಾರ್ಥನೆಯುಂಟು.

**ರಾವಣ.**—(ಸಂತೋಷವನ್ನು ಸೂಚಿಸಿ) ಪ್ರೇಯಸಿ; ಏನು ನಿನ್ನ ಆ ಕೋರಿಕೆ?

**ಮಂಡೋದರಿ.**—ನಿರಪರಾಧಿನಿಯಾದ ಶಚೀದೇವಿಯ ಮೇಲಾ ದರೂ ಕರುಣವಿಟ್ಟು, ಸೆರೆಯಾಗಿರುವ ಮಹೇಂದ್ರನನ್ನು ಅಮರಾವತಿಗೆ ಕಳುಹಿಸಿ ಅನುಗ್ರಹಿಸು. ಪತಿಯನ್ನಗಲಿ ಅವಳು ಎಷ್ಟು ಕೊರಗು ತ್ತಿರುವಳೋ ಏನೋ!

**ರಾವಣ.**—ಪ್ರೇಯಸಿ! ಅವಮಾನದಿಂದ ಅವನು ತಲೆತಗ್ಗಿಸು ವಂತೆ ಮಾಡಿದಮೇಲೆ ಆ ಯೋಚನೆ. ಇದೆಲ್ಲಾ ತೀರ್ಮಾನವಾಗಿಯೇ ಇದೆ.

**ಮಂಡೋದರಿ.**—ಪ್ರಾಣನಾಥ! ತೇಜೋವಧೆಯ ಈ ಪ್ರಯತ್ನ ವನ್ನು ಬಿಟ್ಟುಬಿಡಬೇಕೆಂದು ಬೇಡುವೆನು. ದಿಕ್ಪಾಲಕರಲ್ಲಿ ಅಗ್ಗಳೆಯ ನೆಂದು ಭಾವಿಸಿಕೊಂಡಿದ್ದ ಆತನನ್ನು ಜಯಿಸಿದ ಭಾಗ್ಯವೊಂದೇ ನಮಗೆ ಸಾಕು. ಸೋಲಿನ ಹೊರೆಯಿಂದ ಸಾಯುವಂತಿರುವವನನ್ನು ಅವ ಮಾನ ಶಲ್ಯದಿಂದ ಇರಿಯುವುದು ತರವಲ್ಲ. ಅದೆಂದಿಗೂ ಆರ್ಯಪುತ್ರ ನಂತಹ ಅಜೇಯರಿಗೆ ಒಪ್ಪದು, ಒಪ್ಪದು. (ದೈನ್ಯದೃಷ್ಟಿಯಿಂದ ರಾವಣನ ಮುಖವನ್ನೇ ನೋಡುತ್ತ) ಪ್ರಾಣನಾಥ! ಒಪ್ಪದು, ಒಪ್ಪದು.

**ರಾವಣ.**—(ಸ್ವಗತ) ಪರಮೇಶ್ವರ! ಸೀತಾದೇವಿಯ ಸೌಂದ ರ್ಯದಿಂದ ಮೋಹಿತವಾಗಿರುವ ನನ್ನ ಕಲುಷಿತ ಹೃದಯವು ಪರಿ ಷ್ಕೃತವಾಗುವಂತೆ ಅನುಗ್ರಹಿಸು. ಮಂಡೋದರಿ, ಮಂಡೋದರಿ, ನಿನಗೆ ತಕ್ಕ ಪತಿಯೇ ನಾನು? ಇಲ್ಲ, ಇಲ್ಲ. (ಪ್ರಕಾಶ) ದೇವಿ! ಮಹೇಂದ್ರನನ್ನು ಗೆದ್ದವನೆನಿಸಿದ ನಾನು, ಇಂದು ನಿನ್ನಿಂದ ಸೋತೆನು. ಮಹೇಂದ್ರನನ್ನು ಅಗತ್ಯವಾಗಿ ಬಿಡುಗಡೆ ಮಾಡಿಸುವೆನು.

**ಮಂಡೋದರಿ.**—(ಸಂತೋಷಭರಿತಳಾಗಿ) ಕರುಣಾಳುವಾದ ಆರ್ಯಪುತ್ರನು ಪ್ರಾರ್ಥನೆಯನ್ನು ಸಲ್ಲಿಸಿದುದರಿಂದ ಈ ಸೇವಕಳು ಧನ್ಯಳು. ಮಹೇಂದ್ರನನ್ನು ಬಿಡುಗಡೆ ಮಾಡುವುದೊಂದೇ ಸಾಲದು. ಯಥೋಚಿತವಾದ ಸತ್ಕಾರದೊಡನೆ ಅವನನ್ನು ಬೀಳ್ಕೊಳ್ಳಬೇಕು.

**ರಾವಣ.**—ದೇವಿ! ಸಾತ್ವಿಕತೆಯ ಚಂದ್ರೋದಯದ ಮುಂದೆ ರಜೋಗುಣದ ಅಗಡುತನವು ಕೇವಲ ಮಿಂಚುಹುಳುವಿನಂತಲ್ಲವೆ?

**ಮಂಡೋದರಿ.**—(ನಸು ನಾಚಿ, ಪ್ರೇಮಪೂರ್ಣವಾದ ನೋಟವನ್ನು ಬೀರಿ) ನಾನು ಈ ದಿನ ಆರ್ಯಪುತ್ರನಿಗೆ ಕವಿತೆಯಲ್ಲಿ ಪರೀಕ್ಷೆಯನ್ನಿಟ್ಟಿಲ್ಲ.

**ರಾವಣ.**—(ಮುಗುಳುನಗೆಯಿಂದ) ಸೋಲಿನ ಮೇಲೆ ಸೋಲು. ಅದೇ ಸೊಗಸು. ಈ ಸುಖವು ಎಲ್ಲರಿಗೂ ಲಭಿಸದು.

**ಮಂಡೋದರಿ.**—ಆರ್ಯಪುತ್ರನ ಸೋಲು ಇಲ್ಲಿಗೇ ಮುಗಿಯಲಿಲ್ಲ. ಅಕ್ಷಕುಮಾರನನ್ನು ಅಮರಾವತಿಯ ಯುದ್ಧಕ್ಕೆ ಕರೆದೊಯ್ಯಲಿಲ್ಲವಂತೆ. ಅವನು ವಯಸ್ಸಿನಲ್ಲಿ ಚಿಕ್ಕವನಾದರೂ ಪರಾಕ್ರಮದಲ್ಲಿ ದೊಡ್ಡವನಂತೆ. ಅವನೆದುರಿಗೆ ವಾದದಲ್ಲಿ ಆರ್ಯಪುತ್ರನಿಗೆ ಸೋಲು ಕಾದಿದೆ.

**ರಾವಣ.**—(ಆನಂದಭರಿತನಾಗಿ) ಹಾಲು ಹಸುಳೆ. ಅವನ ಹುಮ್ಮಸ್ಸೇ ಹುಮ್ಮಸ್ಸು. (ಮಂಡೋದರಿಯ ಭುಜದ ಮೇಲೆ ಕೈಹಾಕಿ) ಇಂತಹ ಸೋಲು ಸಾವಿರವಿರಲಿ.

(ತೆರೆಯು ಬೀಳುವುದು.)

# ಎರಡನೆಯ ಅಂಕ

## ದೃಶ್ಯ ೧

[ಅಶೋಕವನ. ವ್ಯಸನಾಕ್ರಾಂತನಾಗಿ ಕಳವಳಪಡುತ್ತಿರುವ ರಾವಣನು ಪ್ರವೇಶಿಸುವನು. ಸಮಯ: ರಾತ್ರಿ.]

**ರಾವಣ.**—(ನಿಟ್ಟುಸಿರನ್ನು ಬಿಟ್ಟು) ಶಾಂತಿ ದೂರವಾದ ನನ್ನ ಮನಸ್ಸಿಗೆ ಇನ್ನು ಸೌಖ್ಯದ ಹಂಬಲೆಲ್ಲಿ? ಎಂತಹ ಘೋರಕೃತ್ಯವನ್ನು ಮಾಡಿದೆನು? ರಾಮನನ್ನು ವಂಚಿಸಿ, ಸೀತೆಯನ್ನಪಹರಿಸಿ ತಂದು ಬಂಧನದಲ್ಲಿಟ್ಟೆನು. ದೇವ! ನನ್ನ ಮನಸ್ಸೇಕೆ ಮೋಹಗೊಂಡಿತು? ಪಾತಕವೆಂಬುದೆಲ್ಲ ಪಾಮರರ ಸಂಕೇತವೆಂದು ನನಗೇಕೆ ತೋರಿತು? ಸೀತೆಯನ್ನು ರಾಮನ ಬಳಿಗೆ ಕಳುಹಿಸಿಬಿಡಲೆ? (ಸ್ವಲ್ಪ ಕಾಲ ಚಿಂತಿಸಿ) ಅಯ್ಯೋ! ಆಗದು, ಆಗದು. ಸೀತೆಯಿಂದಲೇ ನನ್ನ ಸುಖಲಾಲಸೆಯು ತೃಪ್ತಿಯನ್ನೈದಬೇಕು. ಅಯ್ಯೋ? ಎಂತಹ ಘೋರ ಪಾತಕಗಳು! ಸ್ನೇಹಮಯಿಯಾಗಿ, ಪ್ರೇಮಮಯಿಯಾಗಿ, ಲಾವಣ್ಯಮಯಿಯಾಗಿ, ಸಾಧ್ವೀರತ್ನವೆನಿಸಿರುವ ಮಂಡೋದರಿಗೆ ಮೋಸ ಮಾಡಿದೆನೇ ನಾನು! ಮಾರೀಚನನ್ನು ಬೇಡಿ, ಕಾಡಿ, ಬೆದರಿಸಿ, ರಾಮ ಬಾಣಕ್ಕೆ ಬಲಿಯೊಪ್ಪಿಸಿದೆನೇ ನಾನು! ಸೋಗೆ ನವಿಲಿನಂತಿದ್ದ ಸೀತೆಗೆ ಮೋಸದ ಬಲೆಯನ್ನೊಡ್ಡಿ ಬವಣೆಗೊಳಿಸಿದೆನೇ ನಾನು! ಅತ್ತ ಅಂತಃಪುರದಲ್ಲಿರಲಾರೆ, ಇತ್ತ ಸೀತೆಯನ್ನು ಕಾಡಲಾರೆ. ದೇವ! ಎಂತಹ ವಿಷಮ ಸಂಕಟ. ನನ್ನ ನೀಚಕೃತ್ಯವು ಮಂಡೋದರೀ ದೇವಿಗೆ ತಿಳಿದರೆ ಗತಿಯೇನು? ದಾರುಣವಾದ ಮನೋವ್ಯಥೆಯನ್ನು ಅವಳು ತಾಳುವ ಬಗೆ ಹೇಗೆ? ಅಯ್ಯೋ! ನಾನು ಸೀತಾಪಹರಣ ಮಾಡಿದೆ. ನನ್ನಿಂದ ನಿದ್ರಾಪಹರಣವಾಯಿತು. ಒಟ್ಟು ಲಂಕಾನಗರವೇ ಮಗುವಿನಂತೆ ನಿದ್ರಿಸುತ್ತಿರುವ

ಸಮರಾತ್ರಿಗಳಲ್ಲಿಯೂ ನನಗೆ ನಿದ್ರೆಯಿಲ್ಲದ ಬಿರುಗಣ್ಣಿನ ಬವಣೆ. ದಾರುಣವಾದ ಹೃದಯ ಯಾತನೆ. ಅಯ್ಯೋ! ಅನ್ವಯಾನುಗತವಾಗಿ ಬಂದಿದ್ದ ವಿಹಿತಾಚಾರ, ಸದ್ಗುಣಿಯಾದ ಸಂಯಮಿಶ್ರೇಷ್ಠನೆಂಬ ಘನ ತರವಾದ ಪ್ರಶಸ್ತಿ, ಜಗಜ್ಜೇತನಾದ ವೀರಾಗ್ರೇಸರನೆಂಬ ಅಗ್ಗಳಿಯ ತನದ ಸತ್ಕೀರ್ತಿ, ಪ್ರಜಾರಂಜನ ಪರಾಯಣತೆಯ ಶ್ರೇಷ್ಠ ಸಮುದಾ ಚಾರ, ಮಂಡೋದರೀ ಮುಖಾಬ್ಜ ಭೃಂಗವೆಂಬುದಾಗಿ, ಮಂಡೋದ ರಿಯೇ ಪ್ರೀತಿಪಾರವಶ್ಯದ ಮೋಹಮುದ್ರೆಯಿಂದ ಬಿರುದನ್ನಿತ್ತ ದಿನದ ಆ ಸುಖ ಸಾಮ್ರಾಜ್ಯ ವೈಖರಿ—ಇವೆಲ್ಲವನ್ನೂ ಮಣ್ಣುಪಾಲುಮಾಡಿ ದೆನು. ಭಗವತಿ! ಗಿರಿಜಾತೆ! ಹಿಂದಿನ ರಾವಣನಿಗೂ, ಇಂದಿನ ರಾವಣ ನಿಗೂ ಇರುವ ಅಂತರವನ್ನಾದರೂ ನೋಡು. ಮಾತೆ! ನಾನು ಕೈಲಾಸ ಗಿರಿಯನ್ನು ಕವಲಿಸಿ ನನ್ನ ಶಕ್ತಿಯನ್ನು ಪರೀಕ್ಷಿಸಿಕೊಂಡುದನ್ನು ಕಂಡು, ನೀನೆಷ್ಟು ಆನಂದಪಟ್ಟೆ. ಒಡನೆಯೇ ಲೀಲೆಯಿಂದ ಶಿವನ ಫಾಲನೇತ್ರ ವನ್ನು ನಿನ್ನ ಕರಕಮಲದಿಂದ ಮುಚ್ಚಿ, ಅಚ್ಚರಿಗೊಂಡ ಪ್ರಭುವಿನೊಡನೆ "ಕಾಮದಹನನಾದ ಉಗ್ರನನ್ನು ನಂಬಿದವರಾರು?" ಎಂದು ಹೇಳಿ, ಎಂತಹ ಮಂದಹಾಸವನ್ನು ಬೀರಿದೆ! ಅಂತಹ ಮಂದಹಾಸದ ಬೆಳ ದಿಂಗಳು ಅಂಧಕಾರದಿಂದ ತುಂಬಿರುವ ನನ್ನ ಹೃದಯಕಾನನದಲ್ಲಿ ಇನ್ನೆಲ್ಲಿ ಬೆಳಗುವುದು? ಜಗತ್ತಿಗೇ ಮಾತಾಪಿತೃಗಳಾದ ನಿಮ್ಮಾರ್ವರ ಮೆಚ್ಚಿಕೆಗೂ ಪಾತ್ರನಾದ ನಾನು ಅಂದು ಉತ್ಸಾಹದಿಂದ ಉಬ್ಬಿ ಹೋಗಿದ್ದೆನು. ಅದೇ ನಾನು ಇಂದು ಶೋಕ ಸಂತಪ್ತನಾಗಿ ಕುಗ್ಗಿ ಹೋಗಿರುವೆನು. ನನ್ನನ್ನು ಕಂಡು ನಿಮಗೆ ಎಷ್ಟು ಜುಗುಪ್ಸೆಯೋ! ಅಯ್ಯೋ! (ಅರೆವಾಸಿ ಗದ್ಗದ ಧ್ವನಿಯಿಂದ) ಮಾಡಿದೆನು, ಮಾಡಿದೆನು, ಘೋರಪಾತಕವ ನಾ ಮಾಡಿದೆನು! ದೀನನನು ಕಾಪಿಡುವ ಕರುಣಾಳು ಮೂರುತಿಗಳೇ ಪೋದಿರೆಲ್ಲಿಗೆ ನೀವು? ಗಿರಿಜೆಯರಸನೇ ಮೃತ್ಯುವನು ಹಣಿದ ನಿನ್ನ ಶೂಲಮನೆಲ್ಲಿ ಮರೆತೆ? ಬಾರೆನ್ನ ಪುಣ್ಯನಿಧಿಯೇ, ಬಾರೈ

ದಿವಿಜರೊಡೆಯ. ಪಾಪಚೇತನನ ಕೊಲುವೆಯಾದೊಡೆ ಕೊಲ್ಲು ಬಾ. ಕೈಲಾಸ ಗಿರಿಯ ತೂಗಿದ ತೋಳ ತುಲೆಯೊಳ್ ಪರವಧುವ ಸೆಳೆತಂದ ವನ ನೋಡು ಬಾ, ನೋಡು ಬಾ. ಸಿಡಿಲುಗಳ ಮಳೆಗರೆದು ಹರಣ ವನು ಕೊಳುವುದಕೆ ಬೇಗ ಬಾ, ಬೇಗ ಬಾ. (ಅಂಗೈಗಳಿಂದ ಮುಖ ವನ್ನು ಮುಚ್ಚಿಕೊಂಡು ಸ್ವಲ್ಪಕಾಲ ಯಾತನೆಯನ್ನಭಿನಯಿಸುತ್ತ ನಿಂತಿದ್ದು ಆ ಬಳಿಕ ದೀರ್ಘ ನಿಶ್ವಾಸವನ್ನು ಬಿಟ್ಟು, ಮುಖವನ್ನೆತ್ತಿ ಒಂದೆರಡು ಕ್ಷಣ ಕಾಲ ಯೋಚಿಸಿ, ಕೊನೆಗೆ ಮನೋನಿಶ್ಚಯವನ್ನು ಸೂಚಿಸುವ ಗಂಭೀರವಾದ ಮುಖ ಮುದ್ರೆಯಿಂದ) ಇನ್ನು ಚಿಂತಿಸಿ ಫಲವಿಲ್ಲ. ಪಟವು ಹರಿದ ಹಡಗಿನಂತೆ ನನ್ನ ಮನಸ್ಸು ಹಿಡಿತ ತಪ್ಪಿ ಹೊರಟುಹೋಗುತ್ತಲಿದೆ. ಅಯ್ಯೋ! ಶಿವಪೂಜಾ ಧುರಂಧರನೆನಿಸಿದ್ದವನ ಬಾಳು ಹೀಗಾಗಬೇಕೆ? (ಮತ್ತೆ ಹೃದಯ ವೇದನೆಯನ್ನು ಸೂಚಿಸಿ) ಚಿತ್ತ ದಮನಮಾಡಿ ಸೀತೆಯ ಹಂಬಲನ್ನು ತೊರೆಯುವೆನು. ಇಲ್ಲವೇ ಮತ್ತೆ ಸೀತೆಯ ಬಳಿಗೆ ಬಂದು ಪ್ರೀತಿ ಭಿಕ್ಷೆಯನ್ನು ಯಾಚಿಸುವೆನು. (ಹೊರಟು ಹೋಗುವನು.)

[ತೆರೆಯು ಬೀಳುವುದು. ಮತ್ತೆ ತೆರೆಯು ಮೇಲಕ್ಕೇಳುವುದು. ಅದೇ ಅಶೋಕವನದ ಮತ್ತೊಂದು ಭಾಗ. ಶಿಂಶುಪ ವೃಕ್ಷದ ಕೆಳಗೊಂದು ಕೃಷ್ಣಾ ಜಿನವನ್ನು ಹಾಸಿರುವುದು. ಇಬ್ಬರು ರಾಕ್ಷಸಿಯರು ಸ್ವಲ್ಪ ದೂರವಾಗಿ ನಿಂತಿರು ವರು. ಮತ್ತೊಬ್ಬ ರಾಕ್ಷಸಿಯು ಕೃಷ್ಣಾಜಿನವನ್ನೆತ್ತಿ ತಲೆಯ ಮೇಲೆ ಕೊಡಹಿ ಕೊಳ್ಳುವಳು. ಅದನ್ನು ನೋಡಿ ಉಳಿದವರಿಬ್ಬರೂ ನಗುವರು.]

**ರದನಿಕೆ.**—ತಾಟಂಕೆ, ತಾಟಂಕೆ, ಧೂಳಿರುವ ಕೃಷ್ಣಾಜಿನವನ್ನು ದೂರವಾಗಿ ಕೊಡುವುವಂಥೋರನ್ನ ನೋಡಿದ್ದೀನಿ. ಆದರೆ, ಕೃಷ್ಣಾ ಜಿನದ ಮೇಲೆ ಧೂಳಿದೆಯೋ ಇಲ್ಲವೋ ಅಂತ ತಲೇಮೇಲೆ ಕೊಡವಿ ಕೊಳ್ಳೋರನ್ನು ಮಾತ್ರ ನಾನು ಇದುವರೆಗೂ ಎಲ್ಲೂ ನೋಡಿರಲಿಲ್ಲ. (ನಗುವಳು.)

**ಶೈವಲೆ.**—ರದನಿಕೆ! ಹಾಗೆನ್ನಬೇಡವೆ! (ನಗುತ್ತ) ಆನೆಮರಿ ತನ್ನ ತಲೆಯ ಮೇಲಕ್ಕೆ ಧೂಳೆರಚಿಕೊಳ್ಳೋದಿಲ್ಲವೆ? ಇವಳೂ ಗುಜ್ಜಾನೆ

ಮರಿಯ ಹಾಗೆ ಗುಂಡಗುಂಡಗಿದ್ದಾಳೆ. ಇವಳೂ ತಲೆಯ ಮೇಲಕ್ಕೆ ಧೂಳೆರಚಿಕೊಂಡು ತಾನೂ ಅದರಹಾಗೇ ಆಡಿದರೆ ಅದೂ ತಪ್ಪೆ?

**ರದನಿಕೆ.**—ಶೈವಲೆ! ನೀನು ಹೇಳಿದ್ದು ಸರಿ. ನನಗೆ ಅಷ್ಟು ತೋರಲಿಲ್ಲ.

**ತಾಟಂಕೆ.**—(ರದನಿಕೆಯ ಬಳಿಗೆ ಎದ್ದು ಬಂದು) ರದನಿಕೆ! ನಾನೇನೋ ಗುಜ್ಜಾನೆ ಮರಿ, ನಿನ್ನಹಾಗೆ ಬಿದಿರು ಕೋಲಿನಂಥ ಬೀಸು ಮೈ ಪಡೆಯೋ ಭಾಗ್ಯ ನನಗೆ ಬರಲಿಲ್ಲ. ನೀವು ಕಮಲದ ಹೂವಿನ ಹತ್ತಿರ ಇರೋ ಕಪ್ಪೆಗಳು. (ನಗುವಳು.)

**ರದನಿಕೆ.**—ಶೈವಲೆ, ಶೈವಲೆ, ನಿನಗೆ ಒಳ್ಳೆಯ ಏಟು ಕೊಟ್ಟಳು.

**ಶೈವಲೆ.**—ನಿನಗೂ ಅದರಲ್ಲಿ ಭಾಗವಿದೆಯಲ್ಲ. ಏನೆ, ತಾಟಂಕೆ, ನೀನು ಕಮಲದ ಹೂವು. ನಾವು ಕಪ್ಪೆಗಳು. ಅಲ್ಲವೇನೆ? ನಿನ್ನ ಕಮಲದ ಹೂವು ಅಂದುಕೊಂಡು ನಮ್ಮನ್ನ ಕಪ್ಪೆಗಳು ಅಂದದ್ದು ಸರಿಯೋ?

**ತಾಟಂಕೆ.**—ನಿಮ್ಮನ್ನು ಕಪ್ಪೆಗಳು ಅಂದದ್ದು ನಿಜ. ನನ್ನ ಕಮಲದ ಹೂವು ಅಂದುಕೊಳ್ಳಲಿಲ್ಲ.

**ರದನಿಕೆ.**—(ತನ್ನ ಬಲಗೈ ಬೆರಳಿನಿಂದ ತಾಟಂಕೆಯ ಬಾಯಿಯನ್ನು ತೋರಿಸಿ) ಅಂದೆಯಲ್ಲೇ ಇದೇ ಬಾಯಲ್ಲಿ, ಕಮಲದ ಹೂವು—ಅಂತ; ಕಪ್ಪೆ ಅಂತ—

**ತಾಟಂಕೆ.**—ನಾನು ಕಮಲದ ಹೂವು ಅಂದದ್ದು ನಿಜ. ಆದರೆ ಸೀತಾದೇವಿ ಕಮಲದ ಹೂವು, ನೀವು ಕಪ್ಪೆಗಳು. ಕಪ್ಪೆಗಳಿಗೆ ತಮ್ಮ ಬಳಿ ಇರೋ ಕಮಲದ ಹೂವಿನ ಘಮಘಮ ವಾಸನೆ, ಅದರ ಸೊಗಸು, ಎರಡೂ ತಿಳಿಯೋದಿಲ್ಲ. (ಹುಬ್ಬುಗಳನ್ನೆತ್ತಿ, ಕೊರಳನ್ನು ಕೊಂಕಿಸಿ

ತೂಗುತ್ತ) ನಿಮಗೂ ಹಾಗೆ. ಸೀತಾದೇವಿ ಗುಣ, ಅವಳ ಯೋಗ್ಯತೆ ತಿಳೀಲಿಲ್ಲ ಅಂತ ನಾನು ಹೇಳಿದೆ. ಅದು ನಿಜ.

**ಶೈವಲೆ.**—ನಮ್ಮ ಮಂಡೋದರೀ ಮಹಾರಾಣಿ ಕಡಮೇನೋ ಹಾಗಾದರೆ? ಅದಾವರೂ ಹೇಳು ನೋಡೋಣ.

**ತಾಟಂಕೆ.**—ದೇವರೇ ನಿಮ್ಮನ್ನ ನೋಡಿಕೋಬೇಕು. ಅಲ್ಲವೇ! ಮಂಡೋದರೀ ಮಹಾರಾಣಿ—ರಾಜ್ಯಕ್ಕೇ ತಾಯಿಗಿಂತ ಹೆಚ್ಚಾಗಿರೋ ಮಹಾತಾಯಿ—ಕಡಮೇ—ಅಂತ ಸುಳ್ಳು ಬೊಗಳಿ ನಾಲಗೇಲಿ ಹುಳು ಬರಿಸಿಕೋಬೇಕೇ ನಾನು? (ಬಲಗೈ ಮುಷ್ಟಿಯನ್ನು ಗಲ್ಲದ ಕೆಳಗಿಟ್ಟು ಕೊಂಡು ತಲೆಯನ್ನು ಅಲ್ಲಾಡಿಸಿ) ಬದುಕಿ ಬಾಳೋ ಗರತೀನ ಗಂಡ ಕಾಣದಹಾಗೆ ಈ ರಾವಣ ಮಹಾರಾಯ ಹೊತ್ತುತಂದು, "ನನ್ನ ಒಲಿ, ನನ್ನ ಒಲಿ," ಅಂತ ಕಾಡಿ ಬೇಡ್ತಾ ಇದ್ದಾನಲ್ಲಾ. ನನಗೆ ಮೈ ಉರಿದುಹೋಗುತ್ತೆ. ಈ ಹಾಳು ಊಳಿಗದ ಕೆಲಸಾನೇ ಬಿಸಾಡಿ ಓಡಿ ಹೋಗಬೇಕು ಅಂತ ಎಷ್ಟೋ ಸಲ ಯೋಚಿಸಿದ್ದೀನಿ.

**ರದನಿಕೆ.**—ಹೊರಟೇ ಹೋಗು ಮತ್ತೆ. ಮೆಲ್ಲಗೆ ಮಾತಾಡೇ ಮಹರಾಯಗಿತ್ತಿ. ನಮ್ಮ ರಾಜ್ಯದೊಳಗೆ ಗಿಡಕ್ಕೂ ಕಿವಿ. ಯಾರಾ ದರೂ ಹೊಂಚಿ ಕೇಳಿಬಿಟ್ಟಾರು. ದೊರೆ ತನಕ ದೂರು ಮುಟ್ಟಿ, ನಿನ್ನಿಂದ ನಮ್ಮ ಪ್ರಾಣಕ್ಕೇ ಬಂದರೆ?

**ಶೈವಲೆ.**—ಅದೂ ನಿಜವಮ್ಮ. ರಾವಣನಿಗೂ, ಮಂಡೋದರೀ ತಾಯಿಗೂ ಯಾವ ರೂಪ ಅಂದರೆ ಆ ರೂಪ ತಾಳಿ, ಯಾರಿಗೂ ಕಾಣದ ಹಾಗೆ ನಿಂತು ಎಲ್ಲಾ ನೋಡೋಕೆ ಬರುತ್ತಂತೆ. ಅವರು ಈಗ ಇಲ್ಲೇ ಇದ್ದಾರೋ ಏನೋ (ಭಯವನ್ನು ಸೂಚಿಸಿ) ಅಬ್ಬ! ಎದೆಯೇ ನಡುಗುತ್ತೆ.

**ತಾಟಂಕೆ.**—ಹೀಗೇಕೆ ಹೆದರಿಕೆ? ಮಂಡೋದರೀದೇವಿ ಕೇಳಿದ ರೇನೂ ಭಯವಿಲ್ಲ. ಅವಳು ಭೂಲೋಕಕ್ಕೆ ಇಳಿದುಬಂದಿರೋ ಧರ್ಮ

ದೇವತೆ. ರಾವಣ ಕೇಳಿದರೆ ಕೇಳಿಕೊಳ್ಳಲೇಳು. ನನ್ನ ಕೊಂದರೂ, ಎರಡು ಸಲ ಕೊಲ್ಲೋಕೆ ಅವನ ಕೈಲಾಗುತ್ತೇನು?

**ರದನಿಕೆ.**—(ತುಟಿಗಳನ್ನು ಉರುಕಿಸಿ, ಗಲ್ಲದಮೇಲೆ ಎರಡು ಬೆರಳುಗಳನ್ನಿಟ್ಟುಕೊಂಡು) ಚಕ್ರವರ್ತಿ ಅವನು. ಇದೇನೇ ನೀನು ಅವನನ್ನ ರಾವಣ, ರಾವಣ ಅಂತೀಯೆ. ಈ ಮಾತು ಹೊರಗೆ ಹೋದರೆ ನಮ್ಮ ಗತಿಯೇನಮ್ಮ!

**ತಾಟಂಕೆ.**—ಗುಣವಿಲ್ಲದ ಪದವಿಯನ್ನು ಸುಡು. ಕೊಲ್ಲಲೇಳು. ಎಂದಿದ್ದರೂ ಸಾಯಬೇಕು.

**ರದನಿಕೆ.**—ಹೀಗೆಲ್ಲಾ ಹೇಳೋಳು ನಿನ್ನ ಊಳಿಗ ಏಕೆ ಬಿಡಲಿಲ್ಲ?

**ತಾಟಂಕೆ.**—ಸೀತಾದೇವಿಯ ಸೇವೆ ಹೋಗುತ್ತಲ್ಲಾ ಅಂತ. ಎಷ್ಟು ಗುಣ ಆ ಮಹಾತಾಯಿಗೆ! ಅವಳು ಸದಾಕಾಲವೂ ರಾಮನನ್ನು ಕೊಂಡಾಡುತ್ತಾಳೆ. ಇಂಥವಳೇ ಇಷ್ಟು ಕೊಂಡಾಡುವ ಆ ಮಹಾನುಭಾವ ಇನ್ನು ಹೇಗಿದ್ದಾನೋ! ಅವನು ಇನ್ನೆಷ್ಟು ಗುಣವಂತನೋ! ಇನ್ನೂ ಅವಳು ಊಟವೇ ಮಾಡಿಲ್ಲ. ಭದ್ರಕಾಳಿಯನ್ನು ಪೂಜೆ ಮಾಡುತ್ತಾ ಕುಳಿತಿದ್ದಾಳೆ. ನನಗೂ ಊಟವೇ ಬೇಕಿಲ್ಲ. ನಿಮ್ಮ ಹಾಗೆ ಸರದಿಮೇಲೆ ನಾನು ಊಟಕ್ಕೆ ಹೋಗಲೇ ಇಲ್ಲ. ಹೇಗೂ ಜಾಗರಣೆ ದಿನ. ಕಾಳಾಷ್ಟಮಿ. ಪುಣ್ಯವಾದರೂ ಬರಲಿ.

**ಶೈವಲೆ.**—(ವ್ಯಂಗ್ಯವಾಗಿ ನಗುತ್ತ) ಹೇಳಿಯೇ ಇದ್ದೀಯಲ್ಲ ಸೀತಾದೇವಿ ಗುಣ ನಮಗೆ ತಿಳಿದಿಲ್ಲ ಅಂತ. ನೀನಾದರೂ ಅವಳ ಗುಣ ತಿಳಿದಿದ್ದೀಯಲ್ಲ. ನೀನು ಅಷ್ಟು ಅವಳ ಗುಣವನ್ನು ತಿಳಿದವಳು ಅವಳಿಗೆ ಮಾಡಿರುವ ಉದ್ಧಾರವೇನೂ ಅಂತ?

**ತಾಟಂಕೆ.**—ನಾನು ಅವಳಿಂದ ಉದ್ಧಾರವಾಗಬೇಕು. ಅವಳ ಪಾದದ ಧೂಳು ನನ್ನ ತಲೆಯಮೇಲೆ ಬಿದ್ದು ಈ ಹಾಳು ಜನ್ಮ ಪಾವನ

ವಾಗಲಿ ಅಂತ ನಾನು ಕೃಷ್ಣಾಜಿನವನ್ನು ತಲೆಯಮೇಲೆ ಕೊಡವಿಕೊಂಡದ್ದು. (ಸ್ವಲ್ಪಕಾಲ ರೋದಿಸಿ ಸಮಾಧಾನಮಾಡಿಕೊಂಡು) ಈ ಜನ್ಮದಲ್ಲಂತೂ ಹೆಚ್ಚುಕಾಲ ಗಂಡನ ಸೇವೆ ಸಿಕ್ಕಲಿಲ್ಲ. ಇದರಿಂದ ಲಾದರೂ ಮುಂದಿನ ಜನ್ಮಕ್ಕೆ ಅದು ಸಿಕ್ಕಲೀ ಅಂತ. ಆ ಧೂಳಿನಿಂದ ಜನ್ಮವೇ ಸಾರ್ಥಕ. ಮಂಡೋದರೀ ಮಹಾರಾಣಿಯ ಕಾಲುಧೂಳಂತೂ ನನಗೆ ಸಿಕ್ಕೋಹಾಗಿಲ್ಲ. ಸುಲಭವಾಗಿ ಸಿಕ್ಕಿದ ಈ ಧೂಳಿನಿಂದಲಾದರೂ ಪಾವನವಾಗೋಣ ಅಂತ ಹಾಗೆ ಮಾಡಿದೆ.

**ಶೈವಲೆ.**—ತಾಟಂಕೆ! ನೀನು ಎಷ್ಟು ಒಳ್ಳೆಯವಳಮ್ಮ, ತಾಟಂಕೆ! ಆ ಹಾಳು ತಾಟಕಿಯ ವಂಶದಲ್ಲಿ ಹುಟ್ಟಿದ್ದೂ ನೀನೆಷ್ಟು ಗುಣವಂತೆಯಮ್ಮ?

**ರದನಿಕೆ.**—ಗುಣಕ್ಕೂ ಕುಲಕ್ಕೂ ಏನು ಸಂಬಂಧ? ಅದಿರಲಿ. ಅಬ್ಬ! ತಾಟಂಕೆಗೆ ಸೀತಾದೇವಿಯಲ್ಲಿ ಎಷ್ಟು ಭಕ್ತಿ!

**ತಾಟಂಕೆ.**—ಸೀತಾದೇವಿಯೆಂಬ ಹೆಸರನ್ನು ಹೇಳಿದರೇ ನನ್ನ ಮನಸ್ಸು ಆನಂದದಿಂದ ಎಲ್ಲಿಗೋ ಹೋಗುತ್ತದೆ. ವೇದದಲ್ಲಿ ಉಷಾ ದೇವಿಯನ್ನು ವರ್ಣಿಸಿದ್ದಾರಂತೆ. ನಾವಂತೂ ಉಷಾದೇವಿಯನ್ನು ನೋಡಿಲ್ಲ. ಆದರೆ, ಸೀತಾದೇವಿಗಿಂತ ಬೇರೆ ಅವಳು ಸುಂದರಿಯಾಗಿರ ಲಾರಳು. (ತಲೆಯ ಮೇಲಕ್ಕೆ ಕೈ ಜೋಡಿಸಿಕೊಂಡು) ದೇವಿ, ದೇವಿ, ನಮೋ, ನಮೋ! ನಮ್ಮ ಭಾಗದ ಉಷಾದೇವಿ! ನಮೋ, ನಮೋ!

**ಶೈವಲೆ.**—ರದನಿಕೆ! ಎಂಥ ಹುಚ್ಚಿಯೇ ಇವಳು! ಸೀತಾ ದೇವಿಯು ಎದುರಿಗಿಲ್ಲದಿದ್ದರೂ ಅವಳು ಎದುರಿಗೇ ಇದ್ದಂತೆ ನಮಸ್ಕಾರ ಮಾಡುತ್ತಿದ್ದಾಳೆ.

**ತಾಟಂಕೆ.**—ಎದುರಿಗೇ ಇರಬೇಕೇನು? ಊಹೆಯಿಂದ ಕಣ್ಣೆ ದುರಿಗೆ ತಂದುಕೊಳ್ಳಲಾಗುವುದಿಲ್ಲವೇನು? (ನೇಪಥ್ಯದ ಕಡೆಗೆ ನೋಡಿ)

**ಅದೋ! ಸೀತಾದೇವಿಯೇ ಬಂದಳು. ಆಕೆಯ ತೇಜಸ್ಸನ್ನು ನೋಡಿರಿ! ಅವಳು ಮೆಲುನಡೆಯಿಂದ ಬರುತ್ತಿರುವ ಸೊಬಗನ್ನು ನೋಡಿರಿ!** ಹೂವಿನಿಂದ ಭೂಮಿಯನ್ನು ಒತ್ತಿದಂತೆ ಹೆಜ್ಜೆಗಳು ಬೀಳುತ್ತಿವೆ. ನಾವು ಮರೆಯಾಗಿ ನಿಲ್ಲೋಣ. ಪೂಜೆಮಾಡಿ ಬಂದ ಸಂತೋಷದಲ್ಲಿ ಏನು ಹೇಳುವಳೋ ಕೇಳೋಣ.

**ಶೈವಲೆ.**—ಅವಳ ಮಾತೇನೋ ಸೊಗಸು. ಆದರೆ ಅವಳು ದುಃಖದಲ್ಲಿ ಮುಳುಗಿಹೋಗಿದ್ದಾಳಲ್ಲಾ! ಯಾವಾಗ ನೋಡಿದರೂ ರಾಮನನ್ನು ನೆನೆದು ಹಂಬಲಿಸುವುದೇ ಅವಳ ಕೆಲಸ. ಇಲ್ಲ ಇದು; ಇಲ್ಲ **ಪೂಜೆ.** ಇವೆರಡೇ ಅವಳ ಕೆಲಸ. ಹೋಗಲಿ ಬಿಡು. ಆಶೋಕವನದಲ್ಲಿ ಭದ್ರಕಾಳಿಯ ದೇವಸ್ಥಾನವನ್ನು ಕಟ್ಟಿದ್ದೇ ಸಾರ್ಥಕವಾಯಿತು. **ಅದೋ!** ಹತ್ತಿರಕ್ಕೇ ಬಂದುಬಿಟ್ಟಳು. ಮರೆಯಾಗೋಣ. **(ಹೊರಟು ಹೋಗುವರು.)**

**ಸೀತಾದೇವಿ.**—(ಭಕ್ತಿಪಾರವಶ್ಯದಿಂದ ಅರ್ಧ ನಿಮೀಲಿತ ನೇತ್ರೆಯಾಗಿ ಪ್ರವೇಶಿಸಿ) ಭಕ್ತವತ್ಸಲೆಯಾದ ಭದ್ರಕಾಳಿಯ ಪೂಜೆಯಿಂದ ಮನಸ್ಸಿಗೆ ಎಷ್ಟು ನೆಮ್ಮದಿಯಾಯಿತು! ಸರ್ವಶಕ್ತಳಾದ ಆ ಸರ್ವೇಶ್ವರಿಯ ಪಾದಾಬ್ಜಸ್ಮರಣೆಯ ಪರಮಾನಂದಲಹರಿಯಲ್ಲಿ ತೇಲಿ ಓಲಾಡುತ್ತಿದ್ದ ಮನಸ್ಸು ಮತ್ತೇಕೆ ಹಿಂತಿರುಗಿತೋ! ದೇವಿ! ನನ್ನ ಹೃದಯೇಶ್ವರನ ಸೇವಾಭಾಗ್ಯವನ್ನು ಮತ್ತೊಮ್ಮೆ ಕರುಣಿಸು. ನನ್ನ ಪ್ರಾಣನಾಥನಿಗೆ ನಿರಂತರವೂ ಶ್ರೇಯಸ್ಸುಂಟಾಗಿ ಅವನು ಸುಖವಾಗಿರುವಂತೆ ಅನುಗ್ರಹಿಸು. (ದೈವಿಕ ಪ್ರೇಮದ ಮಂದಹಾಸವನ್ನು ಬೀರಿ) ದೇವಿ! ನಿನ್ನ ಮಂದಹಾಸದ ತನಿ ಬೆಳಕಿನಿಂದ ಹೃದಯವು ಒಮ್ಮೆ ಮಿನುಗಿದರೆ ಸಾಕು. ಜನ್ಮ ಜನ್ಮಾಂತರಗಳಿಂದ ಸಂಚಿತವಾಗಿದ್ದ ಅಜ್ಞಾನದ ಅಂಧಕಾರವೆಲ್ಲವೂ ದೂರ ಸರಿಯುವುದಲ್ಲವೆ? ನಿರಂತರವೂ ನಿನ್ನ ಆರಾಧನೆಯಲ್ಲಿ ಮಗ್ನಳಾಗಿರುವಂತೆ ನನಗೆ ಮನಸ್ಸನ್ನು ಕೊಡು. ತಾಯೆ! ಸಂತತವೂ

ನಿನ್ನನ್ನೇ ಚಿಂತಿಸುತ್ತ, ಎಲ್ಲೆಲ್ಲಿ ಮನಸ್ಸು ಹರಿದಾಡುವುದೋ ಅಲ್ಲೆಲ್ಲ ನಿನ್ನ ಸ್ವರೂಪವೇ ವಿರಾಜಿಸುವಂತೆಯೂ, ಎಲ್ಲೆಲ್ಲಿ ಶಿರಸ್ಸು ನಿಲ್ಲುವುದೋ ಅಲ್ಲೆಲ್ಲ ನಿನ್ನ ಪದದ್ವಯವು ಕಂಗೊಳಿಸುವಂತೆಯೂ ಅಮೂಲ್ಯವಾದ ವರವನ್ನು ಕರುಣಿಸೆಂದು ನಿನ್ನನ್ನು ಬೇಡಿಕೊಳ್ಳುವವರೆಷ್ಟು ಪುಣ್ಯಾತ್ಮರೋ! (ಭಕ್ತಿಪರವಶಳಾಗಿ ದೇಹವನ್ನೇ ಮರೆತವಳಂತೆ ನಿಲ್ಲುವಳು.)

**ರಾವಣ.**—(ಪ್ರವೇಶಿಸಿ, ಆನಂದಾಧಿಕ್ಯವನ್ನು ಸೂಚಿಸಿ) (ಸ್ವಗತ) ಇಂದಿನ ದಿನವೇ ಸುದಿನ. ಸೀತೆಯ ಮುಖದಿಂದ ಶೋಕ ಸಂತಾಪಗಳು ಮಾಯವಾಗಿ ಮುಗುಳು ನಗೆಯು ಮುಖದಲ್ಲಿ ಮಿನುಗುತ್ತಿದೆ. ನಗೆಯ ಸೊಗಸೇ ಹೀಗಿರುವಲ್ಲಿ ಬಗೆಯ ಸೊಗಸು ಇನ್ನೆಷ್ಟು ರಮಣೀಯವೋ! ಸೀತೆಯು ನನ್ನನ್ನೇ ಸ್ಮರಿಸುತ್ತ, ಹೀಗೆ ಮಂದಹಾಸವನ್ನು ಬೀರುತ್ತಿರಬಹುದೆ? (ಪ್ರಕಾಶ) ಮೋಹನಾಂಗಿ! ಸೀತೆ! (ಸೀತಾದೇವಿಯು ಭಯಚಕಿತಳಾಗಿ ಬೆಚ್ಚುವಳು.) ಮನೋಹರೆ! ನೀನು ಬೆದರಿದ ವೈಯಾರವು ಕೂಡ ಭುವನಮೋಹಕವಾಗಿದೆ. ರಾಮನನ್ನು ಕಾಣಬೇಕೆಂಬ ನಿನ್ನ ಅಳಿಯಾಸೆಯನ್ನು ಬಿಟ್ಟು, ತಿಳಿ ಮನಸ್ಸಿನಿಂದ ನನ್ನ ಸೇವೆಯನ್ನು ಸ್ವೀಕರಿಸು. ನಿನ್ನ ಮುಖದ ಮೇಲೆ ಇಂದಿನಂತೆ ಸಂತಸದ ಕಳೆಯನ್ನು ನಾನು ಎಂದೂ ಕಂಡುದಿಲ್ಲ. ನನ್ನ ಮನೋರಥವು ಸಫಲವಾಗುವ ಕಾಲವು ಸಮೀಪಿಸಿತೆಂಬುದಕ್ಕೆ ಇದೇ ನಿದರ್ಶನವಲ್ಲವೆ?

**ಸೀತಾದೇವಿ.**—(ಸಹಿಸಲಶಕ್ಯವಾದ ಮನೋ ವೇದನೆಯಿಂದ) ರಾಮಾ! ನಾನು ಎಷ್ಟು ಕರ್ಣಕಠೋರವಾದ ಮಾತುಗಳನ್ನು ಕೇಳಬೇಕಾಯಿತು! (ಎರಡು ಅಂಗೈಗಳಿಂದಲೂ ಮುಖವನ್ನು ಮುಚ್ಚಿಕೊಂಡು, ಹೃದಯ ವೇದನೆಯನ್ನು ಸಹಿಸಲಾರದೆ ಪರಿತಪಿಸುವಳು.)

(ಬಿಳಿಯ ಬಣ್ಣದ ರೇಷ್ಮೆಯ ಸೀರೆಯನ್ನುಟ್ಟು, ಹಸುರು ಬಣ್ಣದ ಪಟ್ಟೆಯ ಕುಪ್ಪಸವನ್ನು ತೊಟ್ಟು, ಒಂದೆರಡು ಆಭರಣಗಳಿಂದ ಕೂಡಿ, ಕೈಯಲ್ಲಿ ಜಪಮಾಲೆ ಧರಿಸಿ ಮಂಡೋದರೀ ದೇವಿಯು ಪ್ರವೇಶಿಸುವಳು.)

**ಮಂಡೋದರಿ.**—(ಸ್ವಗತ) ಆರ್ಯಪುತ್ರನಿಗೆ ಗೋಚರವಾಗದಂತೆ ಅವನನ್ನು ಹಿಂಬಾಲಿಸಿ ಬಂದುದಾಯಿತು. ಈಚೆಗೆ ಆರ್ಯಪುತ್ರನ ಸ್ವಭಾವವೇ ಒಂದು ಬಗೆಯಾಗಿದೆ. ಈ ಅವೇಳೆಯಲ್ಲಿ ಅವನು ಇಲ್ಲಿಗೇತಕ್ಕೆ ಬಂದಿರಬಹುದು? ಅದಕ್ಕೆ ಏನೋ ಒಂದು ಪ್ರಬಲ ಕಾರಣವಿರಲೇಬೇಕು. ಇಲ್ಲದೆ ಹೋಗಿದ್ದರೆ, ಕಾಳಾಷ್ಟಮಿಯಾದ ಈ ದಿನ ನಾನು ಜಾಗರಣೆಯಿಂದಲೂ, ಜಪದಿಂದಲೂ ಗೌರೀದೇವಿಯನ್ನು ಸೇವಿಸುತ್ತಿರುವಲ್ಲಿ ಆರ್ಯಪುತ್ರನು ಎಂದಿನಂತೆ ವರ್ತಿಸದೆ, ಹೀಗೆ ಅಲಂಕಾರಮಾಡಿಕೊಳ್ಳುತ್ತಿದ್ದನೆ? ಚಂದ್ರಹಾಸ ಖಡ್ಗವು ಪಾರ್ಶ್ವದಲ್ಲಿ ಶೋಭಿಸುತ್ತಿದೆ. ಗಂಧಾನುಲೇಪನದ ಸುಗಂಧಕ್ಕೆ ನಾಸಿಕವೇ ಬಿರಿಯುವಂತಿದೆ. ವಜ್ರಾಭರಣಗಳು ಬೆಳದಿಂಗಳಿನಲ್ಲಿ ಮಿನುಗುತ್ತ ಕುಡಿಮಿಂಚುಗಳನ್ನು ಬೀರುತ್ತಿವೆ. (ಒಂದೆರಡು ಹೆಜ್ಜೆಗಳ ದೂರ ಮುಂದಕ್ಕೆ ಬಂದು ಶೋಕಾಕ್ರಾಂತಳಾದ ಸೀತಾದೇವಿಯನ್ನು ಕಂಡು ಆಶ್ಚರ್ಯವನ್ನು ಸೂಚಿಸಿ) ಸಮಸ್ಯೆಯು ಗಭೀರವಾಗುತ್ತಿದೆ. ಇವಳು ಯಾರಿರಬಹುದು? ಲಾವಣ್ಯವೇನೋ ಲೋಕೋತ್ತರವಾಗಿದೆ. ಸೀತಾದೇವಿಯು ಇವಳೇ ಇರಬಹುದೆ? ಮರೆಯಾಗಿ ನಿಂತು ಎಲ್ಲವನ್ನೂ ನೋಡುವೆನು.

**ರಾವಣ.**—ಪ್ರಿಯೆ! ಜಾನಕಿ! ಒಮ್ಮೆ ತಲೆಯೆತ್ತಿ ನನ್ನ ತನುದ್ಯುತಿಯನ್ನು ನೋಡು.

**ಮಂಡೋದರಿ.**—(ಆಶ್ಚರ್ಯದಿಂದ) ಏನು! ಆರ್ಯಪುತ್ರನ ಮಾತೇ ಇದು?

**ರಾವಣ.**—ಮನೋವಲ್ಲಭೆ! ಈ ಪರಿತಾಪದಿಂದ ಏನು ಫಲ? ಲೋಕಗಳನ್ನೇ ಗೆದ್ದು ಅಜೇಯನಾಗಿರುವ ನಾನು, ಅಬಲೆಯಾದ ನಿನ್ನಲ್ಲಿ ಭಿಕ್ಷವನ್ನು ಯಾಚಿಸಲು ಬಂದಿದ್ದೇನೆ. ಎಲ್ಲಿ! ಕಣ್ಣುಗಳನ್ನು ತೆರೆ. ನಿನ್ನ ಕಟಾಕ್ಷವನ್ನು ಒಮ್ಮೆ ಅನುಗ್ರಹಿಸಿ ಆನಂದಗೊಳಿಸು.

**ಸೀತಾದೇವಿ.**—(ಕೋಪದಿಂದ) ಪಾಷಂಡ ವೃತ್ತಿಯ ಹೀನ ಕೀಟವೆ! ದೂರ ತೊಲಗು.

**ರಾವಣ.**—(ಗಹಗಹಿಸಿ ನಕ್ಕು) ಪ್ರಿಯರಮಣಿ! ನಿನ್ನ ರೋಷವೂ ರಮಣೀಯವಾಗಿದೆ. ಜಗಜ್ಜೇತನಾಗಿ ಪುಷ್ಪಕ ವಿಮಾನದಲ್ಲಿ ಓಡಾಡುತ್ತ, ಸಮುದ್ರ ಮಧ್ಯದಲ್ಲಿರುವ ಈ ಲಂಕಾದ್ವೀಪದಲ್ಲಿ ಅಖಂಡ ಸಾಮ್ರಾಜ್ಯ ವನ್ನು ಸ್ಥಾಪಿಸಿರುವ ನಾನು ಕೀಟ ಸದೃಶನೆ?

**ಮಂಡೋದರಿ.**—(ಜಪಮಾಲೆಯನ್ನು ತಿರುಗಿಸುತ್ತ) (ಸ್ವಗತ) ಪ್ರಿಯ ರಮಣಿ!............(ಚಿತ್ತ ದಮನದ ಪ್ರಯತ್ನವನ್ನು ಸೂಚಿಸಿ) ನನ್ನ ಸತ್ತ್ವ ಪರೀಕ್ಷೆಗೂ ಕಾಲವು ಒದಗಿದೆ.

**ಸೀತಾದೇವಿ.**—ರಾಕ್ಷಸಾಧಮ! ಆತ್ಮ ವಿಕಾಸದ ಅಖಂಡ ವೈಭವದ ಮುಂದೆ, ಪಾಶವೀ ವೃತ್ತಿಯವನಾದ ನಿನ್ನ ಆಸುರೀ ಸಂಪತ್ತಿಗೆ ಬೆಲೆಯಲ್ಲಿ ಬಂದೀತು? ನಿನ್ನ ಸಾಮ್ರಾಜ್ಯವೂ, ನಿನ್ನ ವೈಭವವೂ, ನಿನ್ನ ಸಂಪತ್ತೂ, ರಾಜರ್ಷಿಯಂತಿರುವ ನನ್ನ ಪ್ರಾಣೇಶ್ವರನ ಪವಿತ್ರವಾದ ಪಾದಧೂಳಿಯ ಒಂದೇ ಒಂದು ಕಣವನ್ನೂ ಬಾಳಲಾರವು. ದುರ್ಬಲ ರನ್ನು ಹಿಂಸಿಸುವ ನಿನ್ನಂತಹ ಘಾತುಕನ ಐಶ್ವರ್ಯಕ್ಕಿಂತ ಭಿಕ್ಷುಕನ ಬಡತನದ ಬವಣೆಯು ಕೋಟಿಪಾಲು ಮೇಲು.

**ಮಂಡೋದರಿ.**—(ಸ್ವಗತ) ಭಲಾ! ಜಾನಕಿಯು ಚೆನ್ನಾಗಿ ಹೇಳಿದಳು!

**ರಾವಣ.**—ಸ್ವರ್ಗವನ್ನೂ ಉಲ್ಲೋಲ ಕಲ್ಲೋಲ ಮಾಡಿ, ಸುರೇಶನನ್ನೂ ಸಾಮಂತನನ್ನಾಗಿ ಮಾಡಿಕೊಂಡಿರುವನು ಈ ರಾವಣ ...............ಎಚ್ಚರಿಕೆ!

**ಸೀತಾದೇವಿ.**—ನೀನು ಮೊದಲಿನಂತೆ ಧರ್ಮಪರಾಯಣನಾಗಿ ದ್ದರೆ ಲೋಕಗಳೇ ನಿನ್ನೆದುರಿಗೆ ತಲೆಬಾಗಿ ನಿಲ್ಲುತ್ತಿದ್ದುವು. ಆತ್ಮ ತೇಜ

ಸ್ಸಿಲ್ಲದೆ ಹೋದರೆ, ಸ್ವರ್ಗವನ್ನಲ್ಲ—ಸತ್ಯಲೋಕವನ್ನು ಗೆದ್ದವನ ಪಶು ಬಲವೂ ಭಸ್ಮವಾಗಲೇ ಬೇಕು.

**ಮಂಡೋದರಿ.**—(ಸ್ವಗತ) ಜಾನಕಿ! ನೀನು ಜಗದ್ವಂದ್ಯಳು. ವೀರನಾರಿಯ ವೀರವಾಣಿ.

**ರಾವಣ.**—ಮೈಥಿಲಿ! ಈ ಹುಸಿ ಬೆದರಿಕೆಯ ಬೆಡಗನ್ನು ಬಿಡು.

**ಸೀತಾದೇವಿ.**—ಪಾತಕಿ! ದೂರ ತೊಲಗು.

**ರಾವಣ.**—(ನಕ್ಕು) ಪಾತಕ, ಪಾತಕ....ಈ ಪಾತಕವೆಂಬುದು ಕೇವಲ ಸಂಕೇತ ಮಾತ್ರವೇ. ಈ ಪಾತಕವೆಂಬುದು ಶೂರರು ಝಳಪಿಸುವ ಕತ್ತಿಯ ಎದುರಿಗೆ ದುರ್ಬಲರ ಹೇಡಿತನವು ಛಿನ್ನಭಿನ್ನವಾಗದಂತೆ ಅಸಂಸ್ಕೃತರು ಕಟ್ಟಿರುವ ಮೋಸದ ಮೂಟೆ. ಪಾಮರರು ಪ್ರಬುದ್ಧರೆಂಬ ವೇಷವನ್ನು ಧರಿಸಿ ಹೇಡಿಗಳನ್ನು ಹೆದರಿಸಲು ಕಲ್ಪಿಸಿರುವ ಮೋಹಾಡಂಬರ. ಸೀತೆ! ನಿರರ್ಥಕವಾದ ನಿನ್ನ ಆಯಾಸವನ್ನು ಬಿಡು. ರಾಮನು ಇಲ್ಲಿಗೆ ಬರುವುದು ಮರು ಮರೀಚಿಕೆಯೇ ಸರಿ. ಅದೊಂದು ಬಯಲು ಭ್ರಾಂತಿ. ಅವನ್ನು ಬಿಟ್ಟುಬಿಡು. ಲಂಕೇಶ್ವರನ ಒಡತಿಯಾಗಿ ಅಖಂಡ ಸುಖವನ್ನನುಭವಿಸು. ಪ್ರಿಯಳೆ! ದಿವ್ಯಾಭರಣಗಳನ್ನು ಧರಿಸು. ಪತ್ರಲೇಖಾ ಪರಿಶೋಭೆಯಿಂದೊಪ್ಪುವ ಕಪೋಲವನ್ನು ನನ್ನ ಭುಜದ ಮೇಲೂರಿ ಶೃಂಗಾರವನ್ನು ಮೆರೆಯಿಸು. ನನ್ನೊಡನೆ ವಿಮಾನದಲ್ಲಿ ಕುಳಿತು, ಸಾಗರಗಳ ಸೊಬಗನ್ನೂ, ಕುಲಶೈಲಗಳ ಬೆಡಗನ್ನೂ, ದ್ವೀಪ ದ್ವೀಪಾಂತರಗಳ ಸೌಂದರ್ಯ ವೈಭವಗಳನ್ನೂ ನೋಡುತ್ತ, ನನ್ನನ್ನು ಆನಂದಗೊಳಿಸು. ತನುಗಂಧದಿಂದ ಪುಷ್ಪಗಳನ್ನು ನಾಚಿಸುತ್ತ, ಪರಿಜನರ ಸೇವೆಯನ್ನು ಕೈಕೊಳ್ಳುತ್ತ, ನನ್ನೊಡನೆ ರೋಹಿಣಿಯಂತೆ ಮೆರೆ.

**ಸೀತಾದೇವಿ.**—ಪಾಪಿಷ್ಠ! ನನ್ನನ್ನು ಕೆರಳಿಸದೆ ಸುಮ್ಮನೆ

ಹೊರಟುಹೋಗು. ದುರ್ಬಲರನ್ನು ಅನ್ಯಾಯವಾಗಿ ಹಿಂಸಿಸಿದರೆ, ಅವರ ಹೃದಯದಿಂದ ಹೊರಡುವ ಕಿಡಿಯು ಬಡಬಾನಲನಿಗಿಂತ ಹೆಚ್ಚು ಭಯಂಕರವಾದುದು. ಅದರಿಂದ ನಿನ್ನಂತಹವರ ಐಶ್ವರ್ಯ ಮದವು ಉರಿದು ಭಸ್ಮವಾಗುವುದು. ವೃಥಾ ಒಳಲಿ ನನ್ನ ಪ್ರಾಣೇಶ್ವರನ ಬಾಣ ಗಳಿಗೆ ಆಹುತಿಯಾಗಬೇಡ.

**ರಾವಣ.**—ಸೀತೆ! ನನ್ನ ಪ್ರತಾಪಾನಲನ ಮುಂದೆ ಯಾವುದೂ ಸಗ್ಗದು. ನೀನು ನನ್ನ ಪ್ರಾರ್ಥನೆಯನ್ನು ಸಲ್ಲಿಸದೆ ನನ್ನನ್ನು ದೂಷಿಸಿದರೆ ನಿನ್ನನ್ನು ದಂಡಿಸಬೇಕಾದೀತು. (ಖಡ್ಗವನ್ನು ಹಿರಿದು) ಇದು ಚಂದ್ರ ಹಾಸವೆಂಬ ಖಡ್ಗ. ಬಲಿಯಿಂದ ಪಡೆದುದು. ನಿನ್ನ ಮೇಲಣ ವ್ಯಾಮೋಹವನ್ನೂ ತೊರೆದು ಇದನ್ನು ಪ್ರಯೋಗಿಸಬೇಕಾದೀತು. ಎಚ್ಚರದಿಂದಿರು.

**ಸೀತಾದೇವಿ.**—ಯಾರಿಂದ ಹೇಗೆ ಬಂದ ಕತ್ತಿಯೇ ಆಗಿರಲಿ, ಕೊಲ್ಲುವುದಕ್ಕಿಂತ ಹೆಚ್ಚಿನದೇನೂ ಅದರಿಂದಲೂ ಸಾಗದಷ್ಟೆ. ಅವಶ್ಯ ವಾಗಿ ಕೊಲ್ಲು.

**ರಾವಣ.**—(ವ್ಯಂಗ್ಯವಾಗಿ) ಅಬ್ಬ! ಸಾವಿಗೂ ಹೆದರದ ಅಸಮ ಸಾಹಸಿ. ಆಮೇಲೆ?

**ಸೀತಾದೇವಿ.**—ವಿಪತ್ತಿಗೊಳಗಾಗಿ ಪತಿ ಧ್ಯಾನದಿಂದ ಪ್ರಾಣ ವನ್ನು ಬಿಗಿಹಿಡಿದಿರುವ ನನ್ನಲ್ಲಿ ಪರಿಹಾಸವೆ? ನೀನು ನನ್ನನ್ನು ಕೊಂದರೆ, ಘೋರ ಪಾತಕವೂ, ಆತ್ಮಗ್ಲಾನಿಯೂ, ನಿನ್ನ ತಲೆಗೆ ಕಟ್ಟುವುವು. ನನ್ನ ಶೋಕವು ಕೊನೆಗಾಣುವುದು. ನನ್ನ ಅಂತರಾತ್ಮವು ಆರ್ಯಪುತ್ರನ ಬಳಿಗೆ ಹಾರಿಹೋಗಿ, ಆನಂದದಿಂದ ಅವನ ಪದತಲವನ್ನು ಆಶ್ರಯಿಸಿ ನಿಲ್ಲುವುದು. ಕೊಲ್ಲು, ಬಾ, ಕೊಲೆಯೂ ನನಗೊಂದು ಉಪಕಾರವೇ.

**ಮಂಡೋದರಿ.**—(ಸ್ವಗತ) ಪತಿವ್ರತಾಶಿರೋಮಣಿಯ ಪವಿತ್ರ ಭಾವನೆ!

**ರಾವಣ.**—(ಕೋಪದಿಂದ ಹುಬ್ಬುಗಳನ್ನು ಗಂಟಿಕ್ಕಿ) ಸೀತೆ! ನಾನು ಸೈರಿಸಿದಷ್ಟೂ ನಿನ್ನ ಸೊಕ್ಕು ಏರಿಹೋಗುತ್ತಲಿದೆ. ಬರಹೇಳು, ಯಾರು ನಿನ್ನನ್ನು ಉಳಿಸಿಕೊಳ್ಳುವರೋ ನೋಡುವೆನು. ನಾನು ನಿನ್ನನ್ನು ಕೊಲ್ಲುವುದಾದರೆ, ನಿನ್ನನ್ನು ಉಳಿಸಿಕೊಳ್ಳುವವರು ಯಾರಿದ್ದಾರೆ? (ಖಡ್ಗವನ್ನೆತ್ತುವನು.)

**ಮಂಡೋದರಿ.**—(ರಭಸದಿಂದ ರಾವಣನ ಬಳಿಗೆ ಬಂದು) ಉಳಿಸಿಕೊಳ್ಳುವವರಿದ್ದಾರೆ. ನಾನು.......(ಬಲದ ಅಂಗೈಯಿಂದ ಎದೆಯನ್ನು ತಟ್ಟಿಕೊಂಡು ದರ್ಪದಿಂದ) ನಾನಿದ್ದೇನೆ. ವೃಥಾ ಸಾಹಸವೇಕೆ? ಈ ಪಾಶವ ಕೃತ್ಯವನ್ನು ನಿಲ್ಲಿಸು. ಸೀತಾದೇವಿಯನ್ನು ತಂಗಿಯಂತೆ ಭಾವಿಸಿ ಅವಳ ಪತಿಯ ಬಳಿಗೆ ಕಳುಹಿಸು.

**ರಾವಣ.**—(ಅ ಪ್ರ ತಿ ಭ ನಾ ಗಿ) (ಸ್ವಗತ) ಮ ಂ ಡೋ ೯ ದ ರಿ! ಮಂಡೋದರಿ! (ಹಣೆಯನ್ನು ಮುಟ್ಟಿ ನೋಡಿಕೊಂಡು) ಬೆವರಿನ ಹನಿಗಳು!

(ತೆರೆಯು ಬೀಳುವುದು.)

---

## ದೃಶ್ಯ ೨

[ರಾವಣನ ಅರಮನೆಗೆ ಹೋಗುವ ಮಾರ್ಗ. ಕಾವಲುಗಾರರಾದ ಇಬ್ಬರು ಸೈನಿಕರು ಮಾತನಾಡುತ್ತ ಪ್ರವೇಶಿಸುವರು. ಸಮಯ: ಬೆಳಗಿನ ಎಂಟು ಘಳಿಗೆಯ ವೇಳೆ.]

**ಕರಾಳ.**—ಏನಪ್ಪ! ಪಿಂಗಾಕ್ಷ! ವಿಪತ್ತಿನ ಮೇಲೆ ವಿಪತ್ತು. ಇದೆಲ್ಲಾ ಬದುಕೋಕೆ ಬರ್ಲಿಲ್ಲಪ್ಪ.

**ಪಿಂಗಾಕ್ಷ.**—ನೀನು ಬಲೇ ಗಟ್ಟಿಗನಯ್ಯ, ಕರಾಳ. ಏನೇನೋ ಹೇಗೇಗೋ ತಿಳಿದು ಹೇಳ್ಬಿಡ್ತೀಯೆ. ಸದ್ಯ ನೀನು ಈ ಸಲ ಹೇಳ್ತಾ ಇರೋದು ಸುಳ್ಳಾದ್ರೆ ಸಾಕು. ಏನು ವಿಪತ್ತು, ನೀನು ಹೇಳಿದ್ದು ?

**ಕರಾಳ.**—ಲಂಕಾಪಟ್ಟಣ ಸುಟ್ಟು ಆ ಕೋತಿ ಹೋಯ್ತು ನೋಡು ಆಗಲೇ ತಿಳಿದೆ ನಾನು ನಿರ್ಧರಾನ.

**ಪಿಂಗಾಕ್ಷ.**—ಅದು ಮಾತ್ರ ಜ್ಞಾಪಿಸಬೇಡವೋ ಮಾರಾಯ. ನನ್ನ ಮನೆ ಸಾಮಾನೆಲ್ಲಾ ಸುಟ್ಟು ಬೂದಿಯಾಯ್ತು. ಸದ್ಯ ಮನೆ ಯೋರು ಯಾರೂ ಸಾಯಲಿಲ್ಲ. ಎಂಥೆಂಥ ಸಾಮಾನು ಹೋಯ್ತಯ್ಯ?

**ಕರಾಳ.**—ನೀನೇ ಹೀಗೆ ಹೇಳ್ತೀಯಲ್ಲ. ಆ "ಶೃಂಗಾರ ಪ್ರಾಸಾದ" ಅನ್ನೋ ಅರಮನೆ ಪೂರ್ತಿ ಸುಟ್ಟುಹೋಯ್ತಲ್ಲ, ಅದಕ್ಕೇ ನೆನ್ನಬೇಕು, ಹೇಳು. ಏನಯ್ಯ, ಅದೇನು ಚಿತ್ರವಿಚಿತ್ರದ ಸಾಮಾನು ಗಳಯ್ಯ, ಅವು? ರಾಜ್ಯರಾಜ್ಯದ ಒಳ್ಳೆ ಸಾಮಾನುಗಳು, ಲೋಕ ಲೋಕದ ಒಳ್ಳೆ ಸಾಮಾನುಗಳು, ಎಲ್ಲಾ ತುಂಬಿತ್ತೇ ಅಲ್ಲಿ! ಇಂದ್ರನ್ನ ಸೆರೆ ಹಿಡಿದು ತಂದಾಗ ಸ್ವರ್ಗದಿಂದ ಬೇರೆ ಬೇಕುಬೇಕಾದ ಸಾಮಾ ನೆಲ್ಲಾ ಬಂದಿತ್ತಂತೆ, ಅಪರೂಪದ್ದಂತೆ. ಎಲ್ಲಾ ಉರಿದೇ ಹೋಯ್ತೆ! ಪಾಪ, ನಮ್ಮ ದೊರೆ ಆಗಿನಿಂದ ಮಂಕೇಬಿದ್ದು ಕೊರಗ್ತಾ ಇದ್ದಾನೆ. (ಸುತ್ತಮುತ್ತಲೂ ನೋಡಿ) ನಮ್ಮ ಮಾತು ಯಾರಿಗಾದರೂ ಕಿವಿಗೆ ಬಿದ್ದರೆ! ತಲೆ ಬುರುಡೇನೇ ಉಳಿಯೋಲ್ಲಪ್ಪ. ಅವೆಲ್ಲಾ ಉರಿದು ಹೋದದ್ದು ನೋಡಿ ಎಷ್ಟು ಸಂಕಟವಾಗಿರಬಹುದಯ್ಯ? ಎಷ್ಟು ಕಷ್ಟ ಪಟ್ಟು ಸಂಪಾದಿಸಿದ್ದ ಸಾಮಾನು! ಭಂಡಿ ಭಂಡಿ ರತ್ನಗಳೇ ಇದ್ದುವಂತೆ. ಯುದ್ಧ ಮಾಡಿ ಮಾಡಿ ಸಂಪಾದಿಸಿದ್ದು. ಅಯ್ಯೋ ಪಾಪ!

**ಪಿಂಗಾಕ್ಷ.**—ಮನೇ ಹಾಳುಮಾಡಿ ತಂದ ಸಾಮಾನು ಉಳಿ ದೀತೆ? ಹೋಗಲಿ ಬಿಡೊ. ನೀನು ಏನೇ ಹೇಳು. ಅವನು ಯುದ್ಧಾನೇ ಮಾಡಿರಲಿ, ಎಷ್ಟೇ ಕಷ್ಟಪಟ್ಟಿರಲಿ, ಅವನ ಆ ಕಷ್ಟಕ್ಕಿಂತ ಆ ಮಹಾ ತಾಯಿ ಒಂದು ದಿನ ಕಷ್ಟಪಟ್ಟದ್ದು ಕೋಟಿಪಾಲು ಹೆಚ್ಚು.

**ಕರಾಳ.**—ಅದು ಒಪ್ಪಲೇ ಬೇಕು. ಲಂಕೆ ಉರಿದ ದಿನ ಮಂಡೋದರೀ ತಾಯಿ — ಮಹಾತಾಯಿ — ಪಟ್ಟ ಕಷ್ಟ ಹೇಳೋಕೆ

ಹತ್ತು ನಾಲಗೆಯಾದರೂ ಸಾಲದು. ಎಲ್ಲಿ ನೋಡಿದ್ರೂ ಅವಳೆ. ಯಾರಿಗೆ ಸಹಾಯಮಾಡೋಕೂ ಅವಳೇ ಸಿದ್ಧ. ಏನು ಉರಿಯಪ್ಪಾ ಅದು! ಈಗ ನೆನಿಸಿಕೊಂಡರೂ ಜೀವ ಭಗ್‌ಭಗಾಲ್ ಅಂತದೆ! ಮನೆ ಕಳಕೊಂಡೋರಿಗೆ, ಬಂಧುಗಳು ಹೋದೋರಿಗೆ, ಗಾಯವಾದೋರಿಗೆ, ಎಲ್ಲರಿಗೂ ತಾಯಿಗೆ ಬದಲು ತಾಯೋ ಅನ್ನೋ ರೀತಿ ಸಹಾಯ ಮಾಡಿದಳಪ್ಪ. ಅವಳ ಹೊಟ್ಟೆ ತಣ್ಣಗಿರಲಿ.

**ಪಿಂಗಾಕ್ಷ.**—ಹೋಗೊ, ಹೋಗೊ, ಪಾಪ! ಆ ಲಂಕಾಪಟ್ಟ ಣದ ಉರಿಗಿಂತ ಹೆಚ್ಚಿನ ಉರಿ ಅವಳ ಹೊಟ್ಟೇಲೇ ಅಡಗಿರೋವಾಗ ಹೊಟ್ಟೆ ತಣ್ಣಗಿರೋದೆಲ್ಲಿ? ತಣ್ಣಗಿರೋದೆಲ್ಲಿ ಅಂತ ನಾನು ಕೇಳೋದು? ಚಿನ್ನದಂಥ ಮಗ ಅಕ್ಷಕುಮಾರ ಹೋದ. ಗಂಡನೋ ಸಂತೆಗೆ ಹೋಗಿ ಮಾರೀನ ಕೊಂಡುಕೊಂಡು ಬಂದ ಹಾಗೆ ಈ ಸೀತಾದೇವೀನ ತಂದು ಈ ಹಗರಣ ಮಾಡಿದ್ದಾನೆ. ಅವಳ ಸಂಕಟ ದೇವರಿಗೇ ಪ್ರೀತಿ.

**ಕರಾಳ.**—ನಿಜ, ನಿಜವಯ್ಯ, ವಿಭೀಷಣ ತನಗೆ ಬುದ್ಧಿ ಹೇಳೋಕೆ ಬಂದ ಅಂತ, ದೊರೆ ಅವನ್ನ ಸೆರೆಮನೇಲಿಟ್ಟು ಬೇಡಿ ಹಾಕೋಹಾಗೆ ಮಾಡಿದ್ದನಲ್ಲ.

**ಪಿಂಗಾಕ್ಷ.**—ಅದಕ್ಕೂ ಈ ಮಾತಿಗೂ ಏನು ಸಂಬಂಧ?

**ಕರಾಳ.**—ನಿನ್ನ ಬುದ್ಧಿ ಶುದ್ಧ ಒನಗೆಮುಂಡಿ ಹಾಗೆ ಸೂಕ್ಷ್ಮ ಕಣೊ. ಲಂಕಾಪಟ್ಣ ಉರಿಯೋವಾಗ ಸೆರೆಮನೆಗೂ ಬೆಂಕಿ ಬಿತ್ತು. ಒಳಗಿದ್ದೋರೆಲ್ಲ ಉರಿದೇ ಹೋಗೋದ್ರಲ್ಲಿದ್ದರು. ಉರಿಯ ಮಧ್ಯದಲ್ಲಿ ಮಂಡೋದರೀ ಮಹಾರಾಣಿ ನುಗ್ಗಿ ಬಾಗಿಲುಗಳೆಲ್ಲಾ ತೆಗೆದು ಎಲ್ಲರ ಜೀವಾನ್ನೂ ಉಳಿಸಿದಳು.

**ಪಿಂಗಾಕ್ಷ.**—ನೀವೂ ಎಲ್ಲಾ ಸಹಾಯಮಾಡಿದಿರಂತೆ. ಇಲ್ಲಾ ಅದೆಲ್ಲಾ ಸುಳ್ಳೋ?

**ಕರಾಳ.**—ಲೋಕಾನೇ ಆಳ್ತಾ ಇರೋ ಮಹಾತಾಯೇ ಹಾಗೆ ನುಗ್ಗಿದ ಮೇಲೆ ತಾನೇ, ನಾವೆಲ್ಲಾ ಹೋದದ್ದು! ಇಲ್ಲದೆ ಹೋಗಿದ್ದರೆ, ಎಲ್ಲರಿಗೂ ದಿಗಿಲೇ. ದೇವಿ ಹಾಗೆ ನುಗ್ಗಿ ಜೀವ ಉಳಿಸಿದಳು, ಆ ನಮ್ಮಮ್ಮ. ವಿಭೀಷಣನ್ನ ಬಿಡಿಸಿಕೊಂಡು ಬರೋವಾಗ ಉರಿ ತಗಲಿ ಗಾಯವಾಗಿ ಎಷ್ಟು ಘಾಸಿಪಟ್ಟಳೋ ಅವಳು. ದೇವಿಯೇ ಅವಳ ಮೇಲೆ ಆವೇಶ ಬಂದಿರಬೇಕು ಆ ದಿನ. ಅಬ್ಬ! ಏನು ಸಾಹಸ!

**ಪಿಂಗಾಕ್ಷ.**—ಹಾಗೆ ಅವಳು ಒಳ್ಳೇ ಕೆಲಸಮಾಡಿದರೆ, ಅದಕ್ಕೆ ಬದಲಾಗಿ ಅವಳ ಮಗ ಸತ್ತು, ಅವಳಿಗೆ ದುಃಖ ಬರಬೇಕೆ? ಅದಕ್ಕೇ ಮತ್ತೆ ನನಗೊಂದೊಂದು ಸಲ ದೇವರಿಗೆ ಕಣ್ಣಿದೆಯೇ ಅಂತ ಅನುಮಾನ. ಏನು ಪ್ರಪಂಚವಯ್ಯ, ಅನಿಷ್ಟ ಪ್ರಪಂಚ!

**ಕರಾಳ.**—ನಮ್ಮ ದೊರೆ ಈ ಮನೆಹಾಳು ಕೆಲಸ ಮಾಡದೇ ಇದ್ದರೆ ಈ ಗೋಳೇ ಇರದೆ ಹಾಯಾಗಿರ್ತಾ ಇತ್ತು.

**ಪಿಂಗಾಕ್ಷ.**—ಭೂಲೋಕದ ದೇವರು ಅನ್ನೋ ಹಾಗಿದ್ದನಯ್ಯ, ಲೋಕದೋರೆಲ್ಲಾ ಕೈಯೆತ್ತಿ ಮುಗಿಯೋರು. ಅಂಥೋನು ಹೂವಿಗೆ ಹುಳ ಹೊಡೆದ ಹಾಗೆ ಈ ರೀತಿ ಇದೊಂದು ಕೆಟ್ಟ ಗುಣಕ್ಕೆ ಆಹುತಿ ಬಿದ್ದನಲ್ಲಯ್ಯ.

**ಕರಾಳ.**—ಎಲ್ಲಾ ಗ್ರಹಚಾರ. ಅವನೂ ಕೊರಗಿ ಸಣ್ಣಗಾಗಿದ್ದಾನಯ್ಯ. ಇದೊಂದು ಕೆಟ್ಟ ಗುಣ ಬಿಟ್ಟರೆ, ಅಪರಂಜಿ ಅಂಥ ಮನುಷ್ಯ. ಪ್ರಜೆಗಳಿಗೆ ತಂದೆಯ ಹಾಗಿದ್ದಾನೆ. ತಂದೆಯೂ ಮಕ್ಕಳಿಗೆ ಅವನಷ್ಟು ಉಪಕಾರ ಮಾಡಲಾರ.

**ಪಿಂಗಾಕ್ಷ.**—ನೀನು ಇನ್ನೇನೋ ವಿಪತ್ತು ಅಂದೆಯಲ್ಲ, ಅದೇನು?

**ಕರಾಳ.**—ಅದೇ! (ತನ್ನ ಸುತ್ತಲೂ ನೋಡಿ) ಅದೇ! ಬಲೀ ಗುಟ್ಟಪ್ಪ, ಅದು. ನಿನ್ನ ಬಾಯಿ ಒಡಕು ಬಾಯಿ. ನಾನು ಹೇಳೋಲ್ಲ. ನೀನು ಯಾರಿಗೂ ತಿಳಿಸೋದಿಲ್ಲ ಅಂತ ಭಾಷೆ ಕೊಟ್ಟರೇ ಹೇಳೋದು.

**ಪಿಂಗಾಕ್ಷ.**—ನಾನು ಪ್ರಮಾಣವಾಗೂ ಹೇಳೋಲ್ಲ.

**ಕರಾಳ.**—ರಾಮ ಸಮುದ್ರಕ್ಕೆ ಸೇತುವೆ ಕಟ್ಟಿಸಿ ನಮ್ಮ ಪಟ್ಣಕ್ಕೆ ಮುತ್ತಿಗೆ ಹಾಕ್ತಾನಂತೆ.

**ಪಿಂಗಾಕ್ಷ.**—ಆ! ಸಮುದ್ರ! ಸೇತುವೆ! ಸಮುದ್ರಕ್ಕೆ ಸೇತುವೆ ಕಟ್ತಾನೆಯೇ? ಅಮ್ಮಮ್ಮ.

**ಕರಾಳ.**—ಈಗ ಯುದ್ಧ ಮಾಡೋದೇ ಬೇಡವೇ ಅಂತ ಇವತ್ತು ಗುಟ್ಟಾಗಿ ಸಭೆ ನಡೆಯುತ್ತಂತೆ. ಬಲೇ ಗುಟ್ಟಂತೆ ಬಹಳ, ಬಹಳ.

**ಪಿಂಗಾಕ್ಷ.**—ಆದರೆ ವಿಪತ್ತೇನು ಬಂತು, ವಿಪತ್ತು?

**ಕರಾಳ.**—ಏನು ಮಂಕನೋ ನೀನು! ಯುದ್ಧಮಾಡಬೇಕೂ ಅಂತ ತೀರ್ಮಾನವಾದರೆ ನಮಗೆಲ್ಲಾ ಆಪತ್ತೇ.

**ಪಿಂಗಾಕ್ಷ.**—ಯುದ್ಧ ಬರುತ್ತೆಯೆ? ನನ್ನ ಹೆಂಡತಿ ಚಿಕ್ಕಪ್ರಾಯ ದವಳು. ಸಾಯೋದು ಹೇಗಯ್ಯ?

**ಕರಾಳ.**—ಅದಕ್ಕೇ ನಾನು ವಿಪತ್ತು ಅಂದದ್ದು. ಸಾಯೋದು ಹೇಗಯ್ಯ ಅಂತೀಯೆ. ನಾನು ಸತ್ತು ತೋರಿಸಿಕೊಡಲೇನು, ನಿನಗೆ? ನೀನೂ ಒಳ್ಳೇ ಗಿರಾಕೀನೆ! ಬಾ, ಬಾ, ಹೋಗೋಣ. (ಹೋಗುವರು.)

---

## ದೃಶ್ಯ ೩

[ರಾವಣನ ಅಂತಃಪುರ. ಅವನ ಪದವಿಗೆ ತಕ್ಕ ವೈಭವದಿಂದ ಅಲಂಕೃತವಾಗಿರುವುದು. ಸುವರ್ಣ ರಚಿತವಾದ ಭದ್ರಾಸನವೂ ಇತರ ಸುಖಾಸನಗಳೂ ಇರುವುವು. ರಾವಣನು ಭದ್ರಾಸನದಲ್ಲಿ ಕುಳಿತಿರುವನು. ಮಂಡೋದರಿಯು ವ್ಯಸನಾಕ್ರಾಂತಳಾಗಿ ಅವನ ಸಮೀಪದಲ್ಲಿ ರಜತಾಸನದಲ್ಲಿ ಕುಳಿತಿರುವಳು. ಸುಂದರಿಯರಾದ ಚಿಕ್ಕ ವಯಸ್ಸಿನ ಚೇಟಿಯರು ಒಂದು ಗೀತವನ್ನು ಹಾಡುತ್ತಿರುವರು. ಅದು ಮುಗಿದ ತರುವಾಯ ಅವರು ತಲೆಬಾಗಿ ವಂದಿಸಿ ಹೊರಟು ಹೋಗುವರು. ಅಂದು ಆಸ್ಥಾನದಲ್ಲಿ ನಡೆಯುವುದಾಗಿರುವ ಸಭೆಗೆ ಹೋಗಲು

ತಕ್ಕಂತೆ ಮನೋಹರವಾದ ವೇಷದಿಂದ ಒಪ್ಪುತ್ತ, ಮಂಡೋದರೀ ದೇವಿಯು ವೀರಗಾಸೆಯಿಂದ ಕಂಗೊಳಿಸುವಂತೆ ಜರತಾರಿಯ ಸೀರೆಯನ್ನುಟ್ಟು, ಸುಂದರ ತರವಾದ ಕುಪ್ಪಸವನ್ನು ತೊಟ್ಟು, ದಿವ್ಯಾಭರಣಭೂಷಿತೆಯಾಗಿ, ಮಣಿಮೇಖಲೆ ಯನ್ನು ಧರಿಸಿ, ಕಿರೀಟಮಂಡಿತೆಯಾಗಿರುವಳು. ಬಲಭುಜದ ಮೇಲಿನಿಂದ ಬಂದಿರುವ ಕಿಂಕಾಪಿನ ಪಟ್ಟಿಯ ಆಧಾರದಿಂದ ತೂಗುಬಿದ್ದಿರುವ ಬಂಗಾರದ ಒರೆಯಲ್ಲಿ ಖಡ್ಗವು ವಿರಾಜಿಸುತ್ತಿರುವುದು. ಗೀತವನ್ನು ಹಾಡಿ ಚೇಟಿಯರು ಹೊರಟುಹೋದ ತರುವಾಯ ಒಂದೆರಡು ನಿಮಿಷಗಳ ಕಾಲ ದಂಪತಿಗಳು ಮೌನದಿಂದ ಕುಳಿತಿರುವರು. ಕಾಲ : ಪ್ರದೋಷ ಸಮಯಕ್ಕೆ ಮುಂಚಿತವಾಗಿ.]

**ರಾವಣ.**—ಮಂಡೋದರಿ ! ಕ್ಷಮೆಯೂ, ಸಿದ್ಧಿಯೂ, ಒಟ್ಟು ಗೂಡಿ ಸ್ತ್ರೀರೂಪವನ್ನು ಧರಿಸಿ, ಮಂಡೋದರಿಯೆಂಬ ಮುದ್ದಿನ ಹೆಸರನ್ನು ಪಡೆದಿರಬೇಕು. ದೇವಿ! ನೀನು............ನೀನು ನನ್ನ ಅಂತಃಪುರಕ್ಕೆ ಬರುವುದಕ್ಕೆ ಸಮಯವನ್ನು ಕೇಳಿ ಬರಬೇಕಾದ ಆವಶ್ಯಕತೆಯಾದರೂ ಉಂಟೆ ?

**ಮಂಡೋದರಿ.**—(ನಿಟ್ಟುಸಿರನ್ನು ಬಿಟ್ಟು ಮೌನದಿಂದಿರುವಳು. ಒಂದೆರಡು ಕ್ಷಣಗಳ ಕಾಲ ಆ ರೀತಿ ಸುಮ್ಮನಿದ್ದು) ಮನ್ನಿಸು.

**ರಾವಣ.**—(ಸ್ವಗತ) ನಾನು ಹೀಗೇತಕ್ಕೆ ಮಾತನಾಡಲು ಪ್ರಾರಂಭಿಸಿದೆನು ? ಮಂಡೋದರಿಯ ನಿಟ್ಟುಸಿರೂ, ಮೌನವೂ ನನ್ನ ಹೃದಯವನ್ನೇ ಸೀಳಿದುವು. (ಪ್ರಕಾಶ) ಪ್ರೇಯಸಿ ! ಅಪರಾಧವಿದ್ದ ರಲ್ಲವೇ ಮನ್ನಿಸುವುದು ! ನಾನು ಮನ್ನಿಸಲು ನೀನು ಮಾಡಿರುವ ಅಪರಾಧವಾದರೂ ಏನು ? (ಒಂದು ಕ್ಷಣಕಾಲ ಸುಮ್ಮನಿದ್ದು) ಪ್ರಿಯಳೆ ! ಮಂತ್ರಾಗಾರಕ್ಕೆ ಬರಲು ಸಿದ್ಧಳಾಗಿರುವ ನಿನ್ನ ಇಂದಿನ ವೇಷಭೂಷಣ ಗಳು ಎಷ್ಟು ಮನೋಹರವಾಗಿವೆ !

**ಮಂಡೋದರಿ.**—(ಆ ಮಾತುಗಳಿಗೆ ಗಮನವನ್ನೇ ಕೊಡದೆ ಚಿಂತಾಭರದಿಂದ ಕೂಡಿ, ನೆಲವನ್ನೇ ದೃಷ್ಟಿಸುತ್ತಿದ್ದು, ಆ ಬಳಿಕ ತಲೆಯನ್ನೆತ್ತಿ,

ರಾವಣನ ಕಡೆಗೆ ನೋಡಿ) ಆರ್ಯಪುತ್ರ! ಇಂದು ಮಂತ್ರಾಗಾರದಲ್ಲಿ ನಡೆಯುವ ತೀರ್ಮಾನವು ಗುರುತರವಾದುದು. ನೀನು ನನ್ನ ಬಿನ್ನಹದಂತೆ ಯುದ್ಧದ ಯೋಚನೆಯನ್ನು ಬಿಟ್ಟು ಸುಮ್ಮನಿರುವೆಯಷ್ಟೆ?

**ರಾವಣ.**—ಆಂಜನೇಯನಿಂದ ಲಂಕಾದಹನದ ಅಪಮಾನವನ್ನು ಅನುಭವಿಸಿದಮೇಲೆ—ಪ್ರಜೆಗಳ ಕಷ್ಟನಷ್ಟಗಳನ್ನು ನೋಡಿ ದುಃಖಿಸಿದಮೇಲೆ—ಶೃಂಗಾರ ಪ್ರಾಸಾದದಲ್ಲಿದ್ದ ಸುಂದರತರವಾದ ಅಮೂಲ್ಯ ವಸ್ತುಗಳೆಲ್ಲ ಭಸ್ಮವಾದುದನ್ನು ಕಂಡು ಸಂಕಟಪಟ್ಟಮೇಲೆ, ಯುದ್ಧಕ್ಕೆ ಅಳುಕುವುದೆ?

**ಮಂಡೋದರಿ.**—ಒಳಗೆ ಧರ್ಮವು ಉರಿಯಿತು. ಹೊರಗೆ ಲಂಕೆಯು ಉರಿಯಿತು. ಹೊರಗಿನ ಉರಿಯ ಅನಾಹುತಗಳನ್ನೇನೋ ವರ್ಣಿಸಿದೆ. ಅವಕ್ಕೆ ಮಿತಿಯುಂಟು. ಆರ್ಯಪುತ್ರ! ಧರ್ಮವು ಉರಿದುದರ ಅನರ್ಥ ಪರಂಪರೆಗಳಿಗೆ ಮಾತ್ರ ಪರಿಮಿತಿಯೇ ಇಲ್ಲ. ಸೀತಾಪಹರಣದ ಫಲವಾಗಿ ಎಂತಹ ಘೋರ ವಿಪತ್ತುಗಳು ಕಾದಿವೆಯೋ, ಬಲ್ಲವರಾರು? ಯುದ್ಧವೇನಾದರೂ ಕೈಗಟ್ಟದರೆ?

**ರಾವಣ.**—ರಾಮನೆಂಬ ಬೊಂಬೆಯು ನನಗೆ ಲೆಕ್ಕವೆ?

**ಮಂಡೋದರಿ.**—ಶ್ರೀರಾಮನಿಂದ ಸೋತ ಪರಶುರಾಮನೇ ಅದಕ್ಕೆ ಉತ್ತರ ಹೇಳಬೇಕು. ಆರ್ಯಪುತ್ರ! ಶ್ರೀರಾಮನೂ ಶೂರಾಗ್ರಣಿಗಳಲ್ಲೊಬ್ಬನು. ಆದರೂ, ನಿನಗೆ ಮಾತ್ರ ಧರ್ಮದ ಬಲವಿದ್ದ ಪಕ್ಷಕ್ಕೆ, ನೂರು ಮಂದಿ ರಾಮರು ಯುದ್ಧಕ್ಕೆ ಬಂದಿದ್ದರೂ ನೀನು ಲಕ್ಷ್ಯಮಾಡಬೇಕಾಗಿರಲಿಲ್ಲ. ಈಗ ಒಬ್ಬ ರಾಮನು ಲಂಕೆಯನ್ನು ಮುತ್ತಿದರೂ ನಾವು ತಲ್ಲಣಿಸಬೇಕಾಗಿದೆ. ಆಂಜನೇಯನೇನು ಸಾಮಾನ್ಯನೆ? ಇದರಮೇಲೆ ಕಪಿ ಸೈನ್ಯವು ಬೇರೆ.

**ರಾವಣ.**—ಲಂಕೆಯನ್ನು ಮುತ್ತುವುದು ಮಾತನಾಡುವಷ್ಟು

ಸುಲಭವಲ್ಲ. ಅದೂ ಸಮುದ್ರ ಮಧ್ಯದಲ್ಲಿರುವ ಲಂಕೆಗೆ ಸೈನ್ಯ ಸಮೇತವಾಗಿ ಬರುವುದು! ರಾಮನ ಬಳಿಯಲ್ಲಿರುವವರೆಲ್ಲರೂ ಆಂಜನೇಯರಲ್ಲ. ಹುಲು ಮನುಜನಾದ ರಾಮನಿಗೆ ಹೆದರಿ ಶರಣಾಗತನಾಗುವುದಾದರೆ, ನನಗೆಷ್ಟು ಅವಮಾನ? ನಮ್ಮ ಕುಲಕ್ಕೆಷ್ಟು ಅವಮಾನ? ನನ್ನನ್ನು ಹೆತ್ತ ವೀರಮಾತೆಗೆಷ್ಟು ಅವಮಾನ? ಲಂಕಾ ಸಾಮ್ರಾಜ್ಯಕ್ಕೆಷ್ಟು ಅವಮಾನ? ರಾಮನಿಗೆ ಹೆದರಲೇ ನಾನು?

**ಮಂಡೋದರಿ.**—ಪ್ರಭುವೆ! ರಾಮನಿಗೆ ಹೆದರಬೇಡ. ಧರ್ಮಕ್ಕೆ ಹೆದರು.

**ರಾವಣ.**—ಮಾತೆತ್ತಿದರೆ ಧರ್ಮವೆನ್ನುತ್ತಿರುವೆ? ಈ ಧರ್ಮವೆಂಬುದು ಮರ್ತ್ಯ ನಿರ್ಮಿತವಾಗಿ ಮರ್ತ್ಯರನ್ನೇ ಆವರಿಸಿ ಮುಗ್ಧಗೊಳಿಸುತ್ತಿರುವ ಮನೋವಿಕಾರ.

**ಮಂಡೋದರಿ.**—ಇಂತಹ ವಿಪರೀತವೆ? ರಾವಣೇಶ್ವರ! ಹಿಂದಿನ ದಿನಗಳನ್ನು ಸ್ಮರಿಸು. ಆಗಿನ ನಿನ್ನ ಧರ್ಮಪರಾಯಣತೆಯನ್ನು ಜ್ಞಾಪಿಸಿಕೊ. ಆಗ ನೀನಾಡುತ್ತಿದ್ದ ಅಮೃತ ವಾಕ್ಕುಗಳನ್ನು ನೆನಪಿಗೆ ತರಲೆ? ಅಯ್ಯೋ! ಸಾಮವ ಛಂದಗಳಂತೆ ಮನೋಹರವಾಗಿದ್ದ ನಿನ್ನ ವಾಣಿಗಳು ಇನ್ನೆಲ್ಲಿ? ಅಯ್ಯೋ! ನಿನ್ನ ಸ್ವಭಾವವೇ ಈ ರೀತಿ ಮಾರ್ಪಡಬಹುದೆ?

**ರಾವಣ.**—ನನ್ನ ಸ್ವಭಾವವೇನೂ ಮಾರ್ಪಟ್ಟಿಲ್ಲ. ಸಮಯ ಸನ್ನಿವೇಶಗಳು ಮನಸ್ಸನ್ನು ಮಾರ್ಪಡಿಸುತ್ತವೆ.

**ಮಂಡೋದರಿ.**—ಅವಕ್ಕಾಗಿ ಧರ್ಮವನ್ನು ಬಲಿಕೊಡಬೇಕೆ?

**ರಾವಣ.**—ಹೌದು. ಬಲಿಕೊಡಬೇಕಾದುದು ಆವಶ್ಯಕವಾಯಿತು.

**ಮಂಡೋದರಿ.**—ಅದು ಹೇಗೆ ?

**ರಾವಣ.**—ಅದು ಹೇಗಾದರೂ ಇರಲಿ. ಅದರ ಪ್ರಸ್ತಾವವೇ ಈಗ ಬೇಡ.

**ಮಂಡೋದರಿ.**—ಧರ್ಮವನ್ನು ಬಲಿಕೊಟ್ಟು ಹೇಯ ಕಾರ್ಯವನ್ನೆಸಗಬೇಕಾಗುವಷ್ಟು ಉತ್ಕಟವಾದ ಆವಶ್ಯಕತೆಯೆಂದಿಗೂ ಉಂಟಾಗದು. ಪ್ರಭುವೆ! ಈಗಿನ ಸನ್ನಿವೇಶವೇ ನನ್ನ ಪತಿಭಕ್ತಿ ಪರೀಕ್ಷೆಯ ಒರೆಗಲ್ಲೆಂದು ಭಾವಿಸಿರುವವಳು ನಾನು. ಪ್ರೀತಿಭಕ್ತಿಗಳಿಂದ ನಿನ್ನ ಪದತಲದಲ್ಲಿ ಹೃದಯವನ್ನರ್ಪಿಸಿರುವವಳು ನಾನು. ನೊಂದ ಮನಸ್ಸಿನವಳು ನಾನು. ಬೆಂದ ಕರುಳಿನವಳು ನಾನು. ಆರ್ಯಪುತ್ರ ! ನನ್ನ ಮಾತನ್ನು ಲಾಲಿಸು. ಅಂತಹ ಆವಶ್ಯಕತೆಯು ಇರಲಿಲ್ಲವೆಂದು ಹೇಳು.

**ರಾವಣ.**—ಮಂಡೋದರಿ ! ನಾನು ನಿನ್ನಲ್ಲಿ ಅಪರಾಧಿಯೆಂಬುದೇನೋ ನಿಜ. ಆದರೆ, ನನ್ನ ಅಂತರಂಗವೇ ಇದಕ್ಕಾಗಿ ಬೆಂದು ಹೋಗಿದೆ. ಧರ್ಮ ಶರಣನೆಂದು ಹೊಗಳಿಸಿಕೊಳ್ಳುವ ಹೇಡಿಯಾದ ಆ ರಾಮನು ದಸ್ಯುಗಳಿಗಿಂತ ಕೀಳಾಗಿ ನಡೆದು, ನನ್ನ ತಂಗಿ ಶೂರ್ಪನಖಿಗೆ ಅಸಭ್ಯರೂ ಅಳುಕುವಂತಹ ಶಿಕ್ಷೆಯನ್ನು ವಿಧಿಸಿದನಲ್ಲಾ ! ಸೀತಾಪಹರಣವೇ ಅದಕ್ಕೆ ತಕ್ಕ ಪ್ರತೀಕಾರವೆಂದು ಭಾವಿಸಿ, ನಾನು ಸೀತೆಯನ್ನು ತಂದುದುಂಟು.

**ಮಂಡೋದರಿ.**—ಶೂರ್ಪನಖಿಯು ಬಾಲ್ಯ ವಯಸ್ಸಿನಲ್ಲಿ ವಿಧವೆಯಾದುದಕ್ಕಾಗಿ ನಾನೂ ಮರುಗುತ್ತಿದ್ದೆನು. ಅವಳಿಗೆ ವಿಧಿಸಲ್ಪಟ್ಟ ಕ್ರೂರ ದಂಡನೆಯನ್ನು ಕಂಡು ನಾನೂ ಕಣ್ಣೀರು ಬಿಟ್ಟೆನು. ಆದರೂ, ಅವಳು ಮಾಡಿದುದು ಮಹಾಪರಾಧ....ಮಹಾಪರಾಧ....ಶ್ರೀರಾಮನನ್ನು ಮೋಹಿಸಿ ಹಗರಣವನ್ನು ತಂದುಕೊಂಡುದು ತಪ್ಪು.

**ರಾವಣ.**—ನಿನ್ನ ವಾದವು ಅಲ್ಲಿಗೆ ಮುಗಿಯಿತಷ್ಟೆ ?

**ಮಂಡೋದರಿ.**—(ದರ್ಪದಿಂದ) ನಾನು ವಾದಿಸಲು ಬಂದವಳಲ್ಲ. ಸರ್ವನಾಶವು ಸಂಭವಿಸದಂತೆ ಸಲಹೆ ಹೇಳಲು, ನಿನ್ನ ಆಪ್ತ ಸಚಿವಳಾಗಿ ಇಲ್ಲಿಗೆ ಬಂದಿರುವವಳು. ರಾವಣನ ಮೋಹದ ಮಡದಿಯಾಗಿ ನಾನು ಇಲ್ಲಿಗೆ ಬಂದಿಲ್ಲ. ಲಂಕಾ ಸಾಮ್ರಾಜ್ಯದ ಚಕ್ರವರ್ತಿನಿಯಾಗಿ, ಲಂಕಾ ಮಾತೆಯ ದೀನ ಸೇವಕಳಾಗಿ ನಾನು ಇಲ್ಲಿಗೆ ಬಂದಿದ್ದೇನೆ.

**ರಾವಣ.**—ಮಂಡೋದರಿ! ನಿನ್ನ ಒಂದೊಂದು ಕಾರ್ಯದಿಂದಲೂ, ನಿನ್ನ ಒಂದೊಂದು ಮಾತಿನಿಂದಲೂ, ನಿನ್ನಲ್ಲಿ ನನಗೆ ಗೌರವ ಬುದ್ಧಿಯು ಹೆಚ್ಚುತ್ತಿದೆ. ರಾಮನ ಅಪರಾಧಕ್ಕೆ ಸೀತಾಪಹರಣವೇ ತಕ್ಕ ದಂಡನೆಯಾಯಿತು.

**ಮಂಡೋದರಿ.**—ಸೀತಾಪಹರಣದಿಂದ ಮಾತ್ರವೇ ಅದು ಕೊನೆಗಂಡಿದ್ದರೆ—ಸೀತಾದೇವಿಯನ್ನು ಶ್ರೀರಾಮನ ಬಳಿಗೆ ಕಳುಹಿಸಿ ಅವನಿಗೆ ಬುದ್ಧಿ ಕಲಿಸಿದ್ದರೆ—ಧರ್ಮಚ್ಯುತಿಗೆ ಅವಕಾಶವೇ ಇರುತ್ತಿರಲಿಲ್ಲ. ಕದ್ದು ತಂದೆಯೇ ಹೊರತು ಗೆದ್ದು ತರಲಿಲ್ಲ. ರಾಮನು ಪರಾಕ್ರಮಿಯೆಂಬುವಕ್ಕೆ ಅದೂ ಸಾಕ್ಷಿ. ಧರ್ಮದ ಬೆಂಬಲವಿದ್ದರಲ್ಲವೇ ಧೈರ್ಯದ ಹಂಬಲು!

**ರಾವಣ.**—(ಬೇಸರದಿಂದ) ಅಯ್ಯೋ ಧರ್ಮವೆ! ಸೌಂದರ್ಯ ಮುಗ್ಧರಾದ ಎಷ್ಟೋ ಜನರು ಪರಸತಿಯರನ್ನು ಕಂಡು, ರಾವಣನು ಆಚರಿಸಿದಂತೆಯೇ ಮಾಡಲು ತವಕಪಡುತ್ತಾರೆ. ಆದರೆ, ಸಾಮರ್ಥ್ಯವಿಲ್ಲದೆ ಸುಮ್ಮನಾಗುತ್ತಾರೆ. ಸಾಮರ್ಥ್ಯವಿರುವುದಾದರೆ ಆ ಮಾತೇ ಬೇರೆ.

**ಮಂಡೋದರಿ.**—(ಹೃದಯ ವೇದನೆಯಿಂದ ಮುಖವನ್ನೇ ಹಿಂಡಿಕೊಂಡು) ಅಯ್ಯೋ! ಎಷ್ಟು ಅನರ್ಥಕಾರಿಯಾದ ಮಾತುಗಳು!

ಹಾಗಾದರೆ, ನಾನು ಪ್ರೀತಿಸಿ ಓಲೈಸಿದುದು ಆಸುರೀ ಸಂಪತ್ತಿನ ಅಧಿ ದೇವತೆಯಂತಿಪ್ಪ ರಾವಣ ರೂಪದ ಮಾಂಸದ ಮುದ್ದೆಯನ್ನೇ?........ ಹೃದಯೇಶ್ವರ! ಬೇಡ, ಬೇಡ, ಈ ನೃಶಂಸ ವೃತ್ತಿಯು ಬೇಡ. ದೇವ! ಈ ಬಗೆಯ ಮನೋಭಾವನೆಯು ನಿನಗಲ್ಲ. ವಿಷಯಲಂಪಟ ತನವೇ ಜೀವನ ಸರ್ವಸ್ವವೆಂದು ಭಾವಿಸಿರುವ ಮದೋನ್ಮತ್ತರಿಗೆ. ಪಶುಪತಿಯು ನಿನ್ನ ಸತ್ತ್ವ ಪರೀಕ್ಷೆಗೆ ಸಮಯವನ್ನೊದಗಿಸಿದ್ದಾನೆ.

**ರಾವಣ.**—ನಡೆಯುವುದು ನುಡಿಯುವಷ್ಟು ಸುಲಭವಲ್ಲ. ಕಿವಿ ಮೂಗುಗಳನ್ನು ಕಳೆದುಕೊಂಡ ತಂಗಿಯ ವಿಕಟ ರೂಪವು ನನ್ನ ಕಣ್ಣೆದುರಿಗೆ ಬಂದರೆ...................

**ಮಂಡೋದರಿ.**—(ಬಾಲವನ್ನು ತುಳಿದ ಕಾಳಸರ್ಪದಂತೆ ನಿಂತು) ನಿನ್ನ ಈಗಿನ ಹೃದಯ ವಿಕಾರಕ್ಕೆ ಈ ಪ್ರತೀಕಾರದ ಹೆಸರನ್ನಿಟ್ಟಿರುವೆ ಯಲ್ಲವೆ? ಮನಸ್ಸಿನೆದುರಿಗೆ ಬುದ್ಧಿಯನ್ನು ನಾಟ್ಯವಾಡಿಸಿ, ನಿನ್ನನ್ನು ನೀನೇ ವಂಚಿಸಿಕೊಳ್ಳುವುದೆ? ಧರ್ಮವೃಕ್ಷವನ್ನು ಕಡಿದು ನೆಲಕ್ಕುರು ಳಿಸಿ ಪತಿತನಾಗುವುದೆ? ನುಡಿಯುವುದು ನಡೆಯುವಷ್ಟು ಸುಲಭವಲ್ಲ ವಂತೆ! ತೇಜಸ್ವಿಗಳಾದವರಲ್ಲಿ ನಡೆಯುವುದು ನುಡಿಯುವುದಕ್ಕಿಂತಲೂ ಸುಲಭ. ಅಗ್ಗೆ ನುಡಿಗಿಂತ ನಡೆಯೇ ಮೊದಲು.

**ರಾವಣ.**—ಮಂಡೋದರಿ! ನನ್ನ ಸ್ಥಿತಿಯನ್ನು ಅರಿತಿದ್ದರೆ, ನೀನೆಂದಿಗೂ ಹೀಗೆ ಹೇಳುತ್ತಿರಲಿಲ್ಲ. ನೀನು ಇದುವರೆಗೂ ನನ್ನ ಸುಖ ದುಃಖಗಳಲ್ಲಿ ಸಮಭಾಗಿನಿಯಾಗಿದ್ದವಳು. ನನ್ನ ದುಃಖದ ಆಳವನ್ನರಿ ಯದೆ ನೀನೂ ಬಿರುನುಡಿಗಳನ್ನಾಡುತ್ತಿರುವೆ. ಸೀತಾಪಹರಣಮಾಡಿ ನಾನು ದುಃಖದ ಮಡುವಿನಲ್ಲೇ ಮುಳುಗಿದ್ದೇನೆ.

**ಮಂಡೋದರಿ.**—ನಾಥ! ಹೀಗೇಕೆ ಕ್ರೂರಳನ್ನು ಕೊಯ್ಯುವೆ? ಲಂಕೆಯನ್ನು ಸುಟ್ಟುದಕ್ಕಾಗಿ ಆಂಜನೇಯನನ್ನು ನೀನು ಕೊಲ್ಲಲುದ್ಯುಕ್ತ

ನಾದಾಗಿನ ನನ್ನ ವರ್ತನೆಯನ್ನು ಸ್ಮರಿಸಿಕೊ. ಅಯ್ಯೋ! ಅದು ನನ್ನ ಕರುಳೇ ಬೆಂದ ದಿನ. ಅಕ್ಷಕುಮಾರನು ಮೃತಪಟ್ಟ ದಿನ. ಅದನ್ನು ಸ್ಮರಿಸಿಕೊ. ನನಗೆ ದುಃಖವಿಲ್ಲವೆ?

**ರಾವಣ.**—ಕುಮಾರನಲ್ಲಿ ನನಗೂ ಪ್ರೀತಿಯಿದ್ದಿತು. ಆದುದರಿಂದಲೇ, ಅವನನ್ನು ಕೊಂದ ಅಪರಾಧಕ್ಕಾಗಿ ಆಂಜನೇಯನನ್ನು ನಾನು ವಧಿಸಹೋದುದು.

**ಮಂಡೋದರಿ.**—ಕುಮಾರನಿಗಿಂತ ಧರ್ಮವು ಹೆಚ್ಚೆಂದು ನಾನು ಭಾವಿಸಿದುದರಿಂದಲೇ, ನಾನು ಅದಕ್ಕೆ ಅವಕಾಶಕೊಡದೆ ಅಡ್ಡಿಯಾಗಿ ಬಂದುದು. ಆಂಜನೇಯನು ನೂರುಮಂದಿ ಅಕ್ಷಕುಮಾರರನ್ನು ವಧೆಮಾಡಿದವನಾಗಿದ್ದರೂ ನನ್ನ ಗುಂಡಿಗೆಯ ಬಿಸಿರಕ್ತವನ್ನು ಬಸಿದು, ದೂತ ವಧೆಯ ಧರ್ಮದ್ರೋಹವನ್ನು ತಪ್ಪಿಸುವುದಾಗಿ ಹೇಳಿ, ನಿನ್ನ ಖಡ್ಗಕ್ಕೆ ನಾನೇ ಮೊದಲು ಆಹುತಿಯಾಗಲು ಸಿದ್ಧವಾಗಿ ನಿಂತುದು. ದೇವ! ನಿನ್ನ ರಾಜ್ಯದಲ್ಲಿರುವ ಪುರುಷರೆಲ್ಲರೂ ನನ್ನ ಇಂದ್ರಜಿತುವಿಗೆ ಸಮಾನ. ಅವರಿಗೆ ಸೇರಿರುವ ರಾಜ್ಯದ ಸತ್ಕೀರ್ತಿಯನ್ನುಳಿಸಲು ನನ್ನ ದೇಹವೂ, ನನ್ನ ಪ್ರಾಣವೂ, ಎರಡೂ ಮೀಸಲು.

**ರಾವಣ.**—ನೀನು ವೀರ ರಮಣಿ. ನಾನು ಅದನ್ನು ಬಲ್ಲೆ. ಲೋಕವೂ ಬಲ್ಲುದು.

**ಮಂಡೋದರಿ.**—ಪ್ರಭುವೆ! ಇದು ಈ ಬಗೆಯ ಹೊಗಳಿಕೆಗೆ ಸಮಯವೆ? ನನಗೆ ಇದೊಂದೂ ಬೇಡ. ನನ್ನ ಮನಸ್ಸೇ ಹುಣ್ಣಾದಂತಿದೆ. ಕ್ಷಾತ್ರತೇಜ ಪ್ರಧಾನವೆನಿಸಿ ಕಂಗೊಳಿಸುವ ಸಾತ್ವಿಕತೆಯಿಂದ ನೀನು ಮತ್ತೊಮ್ಮೆ ಬೆಳಗಿದರೆ, ಆಗ ಮಾತ್ರವೇ ನನ್ನ ಮನಸ್ಸಿಗೆ ಸಂತೋಷ. ಅಂದಿನಿಂದಲೇ ನಮಗೆ ಸುಖಪ್ರಾಪ್ತಿ. ನೀನಾವಾಗಲೂ ಇತರರೆಲ್ಲರಿಗಿಂತಲೂ ಮೇಲಣ ಹಂತದಲ್ಲಿದ್ದವನು. ನಿನ್ನ ಬಗೆಯೇ

ಬೇರೆ. ಶೂಲಿಯನ್ನು ಒಲಿಸಿಕೊಂಡು ಜೀವರತ್ನಗಳ ಜಪಮಾಲೆ ಯನ್ನರ್ಪಿಸಿದ ಭಕ್ತಾವತಂಸನಲ್ಲವೇ ನೀನು! ಪರಮೇಶ್ವರನು ಪ್ರಸನ್ನ ನಾಗಿ ನೀನು ತಪಸ್ಸಿನಿಂದ ಬಳಲಿದೆಯೆಂದು ಮೈದಡವಿದಾಗ, "ದೇವ! ನಿನ್ನ ಸೇವೆಗೆ ಸಮರ್ಪಿಸಲು ಹತ್ತಾರು ದೇಹಗಳನ್ನೂ ಹತ್ತಾರು ಜೀವಗಳನ್ನೂ ಕೊಡಬಾರದಾಗಿದ್ದಿತೆ?" ಎಂದವನಲ್ಲವೇ ನೀನು! ಮಹೇಶನನ್ನು ಮೆಚ್ಚಿಸಿ ವರಗಳನ್ನು ಪಡೆದ ಸಂಯಮಿ ಶ್ರೇಷ್ಠನಲ್ಲವೇ ನೀನು! ಅಯ್ಯೋ! ಸೃಷ್ಟಿಯ ಸತ್ತ್ವವೇ ರಾವಣ ರೂಪವನ್ನು ತಳೆದು ಹೂವಿನಂತೆ ಅರಳುತ್ತಿದ್ದಿತೆಂದು ನಾನು ಹಿಗ್ಗುತ್ತಿದ್ದೆನಲ್ಲಾ! ಕಾಮ ವಿಕಾರದ ಅಂಧ ತಮಸ್ಸಿನಲ್ಲಿ ಮುಳುಗಿ, ನಿನ್ನ ದಿವ್ಯ ತೇಜಸ್ಸನ್ನು ಕಳೆದುಕೊಳ್ಳುವೆಯಾ? ಬೇಡ, ಪ್ರಿಯನೆ, ಬೇಡ. ನಿನ್ನನ್ನು ಬೊಗಸೆ ಯೊಡ್ಡಿ ಬೇಡುವೆನು.

**ರಾವಣ.**—ದಾಳವು ಉರುಳಿಹೋಯಿತು. ಮಂಡೋದರಿ! ಆತ್ಮ ಸಮರದಿಂದ ಕ್ಷತವಿಕ್ಷತನಾಗಿದ್ದೇನೆ. ನಾನೇ ನನ್ನನ್ನು ನಿಂದಿಸಿ ಕೊಂಡಿರುವಷ್ಟು ಮಟ್ಟಿಗೆ ಮತ್ತಾರೂ ನನ್ನನ್ನು ನಿಂದಿಸಲಾರರು. ಒಮ್ಮೆ ಮೋಹಾಂಧಕಾರಕ್ಕೆ ವಶವರ್ತಿಯಾಗಿ ಪಾಷಂಡನಂತೆ ವರ್ತಿಸುತ್ತೇನೆ. ಮರುಕ್ಷಣವೇ ನನ್ನ ಅವಿವೇಕಕ್ಕಾಗಿ ನಾನೇ ಮನ ಮರುಗಿ ಸಂಕಟಪಡುತ್ತೇನೆ.

**ಮಂಡೋದರಿ.**—ಅದಕ್ಕಾಗಿಯೇ ನಾನು ಹೇಳುವುದು. ಕೆಳ ಕ್ಕುರುಳುವುದಕ್ಕೆ ಮೊದಲೇ ಎಚ್ಚೆತ್ತುಕೊ. ಧರ್ಮವನ್ನು ಶರಣೆಂದು ಮತ್ತೆ ಉದ್ಧಾರವಾಗು. ನನಗೂ, ಅಖಿಲಜಗತ್ತಿಗೂ ಆದರ್ಶಪ್ರಾಯ ನಾಗಿ ಸಾತ್ವಿಕ ವೃತ್ತಿಯನ್ನವಲಂಬಿಸು. ಪ್ರಿಯನೆ! ನಿನ್ನ ಪದತಲದಲ್ಲಿ ಆತ್ಮಸಮರ್ಪಣೆ ಮಾಡಿ ಸರ್ವಸ್ವವೂ ನೀನೇ ಎಂದು ನಂಬಿರುವವಳು ನಾನು. ಪತಿಪ್ರೇಮವೆಂಬ ಸೂತ್ರದಲ್ಲಿ ಹೃದಯವನ್ನೂ, ಮನಸ್ಸನ್ನೂ

ಬುದ್ಧಿಯನ್ನೂ, ಪ್ರಾಣವನ್ನೂ, ಅಂತರಾತ್ಮವನ್ನೂ, ಸೇರಿಸಿ ಪುಷ್ಪ ಮಾಲಿಕೆಯಂತೆ ನಿನ್ನ ಕೊರಳಿಗೆ ಹಾಕಿ, ಸ್ವಂತ ವ್ಯಕ್ತಿತ್ವವನ್ನೇ ಮರೆತಿರುವವಳು ನಾನು. ಪ್ರಿಯನೆ! ನನ್ನನ್ನು ಮುಳುಗಿಸಬೇಡ. ನೀನೂ ಉದ್ಧಾರವಾಗಿ ನನ್ನನ್ನೂ ಉದ್ಧಾರಮಾಡು. ಸರ್ವಮಂಗಳೆಯು ನಿನಗೆ ಸಾಮರ್ಥ್ಯವನ್ನು ಕೊಡಲಿ. (ಭಕ್ತಿಯಿಂದ ಸರ್ವಮಂಗಳೆಯನ್ನು ಪ್ರಾರ್ಥಿಸುವಳು.)

**ರಾವಣ.**—(ಆರ್ತಸ್ವರದಿಂದ) ಮಂಡೋದರಿ! ಮಂಡೋದರಿ!

**ಮಂಡೋದರಿ.**—ನಾಥ! ನಿನ್ನ ಆಕ್ರಂದನದ ಆರ್ತಸ್ವರವೇ ಮಂಗಳದ ಮುಂಬೆಳಗಿನ ಉದಯ ಗೀತೆ. ಪ್ರಾಣೇಶ್ವರ! ಪಶ್ಚಾತ್ತಾಪದಿಂದ ನಿನ್ನ ಪಾಪವನ್ನು ತೊಳೆದು ನಿನ್ನ ಸ್ಥಾನಮಾನಗಳಿಗೆ ತಕ್ಕಂತೆ ವರ್ತಿಸು. ನಿನ್ನ ಶ್ರೇಯಸ್ಸೂ, ಲಂಕಾ ಸಾಮ್ರಾಜ್ಯದ ಪವಿತ್ರತೆಯೂ, ಧರ್ಮಪರಾಯಣತೆಯ ನಿನ್ನ ವಜ್ರಕವಚವೂ, ನನ್ನ ಜೀವನದ ಮುಖ್ಯಾವಲಂಬನ.

**ರಾವಣ.**—(ಸ್ವಪ್ನದಿಂದ ಎಚ್ಚೆತ್ತವನಂತೆ ದಿಗ್ಭ್ರಮೆಯನ್ನು ಸೂಚಿಸಿ, ಪರಿತಾಪ ಪೂರಿತವಾದ ದೀನಸ್ವರದಿಂದ) ಧರ್ಮಪರಾಯಣತೆಯ ವಜ್ರಕವಚ!....ಅಯ್ಯೋ....ಶಿವನು ಕಳುಹಿಸಿದ್ದ ಸಂದೇಶದ ನುಡಿಗಳಿವು.... ದಾರುಣವಾದ ಹೃದಯ ಜ್ವಾಲೆ....ದೇವ ದೇವ! ಮೋಹಾಂಧಕಾರ ನಿಮಗ್ನ ಪಶುಪ್ರಾಯನಾಗಿ ಎಂತಹ ಹೀನಕಾರ್ಯವನ್ನಾಚರಿಸಿದೆನು!

**ಪ್ರತಿಹಾರಿ.**—(ನೇಪಥ್ಯದಿಂದ) ಮಹಾಪ್ರಭುವಿಗೆ ವಿಜಯುವಾಗಲಿ!

**ರಾವಣ.**— (ಗಟ್ಟಿಯಾಗಿ) ಏನದು?

**ಪ್ರತಿಹಾರಿ.**—ಕುಂಭಕರ್ಣ ದೇವನೂ, ವಿಭೀಷಣ ದೇವನೂ ದಯಮಾಡಿಸಿದ್ದಾರೆ.

**ಮಂಡೋದರಿ.**—ಅವರನ್ನು ಪ್ರವೇಶಿಸು.

**ಪ್ರತಿಹಾರಿ.**—(ಒಳಗಿನಿಂದಲೇ) ಅಪ್ಪಣೆ. (ಕುಂಭಕರ್ಣನೂ, ವಿಭೀಷಣನೂ ಪ್ರವೇಶಿಸುವರು. ರಾವಣ ಮಂಡೋದರಿಯರಿಗೆ ಮಣಿದು, ರಾವಣನು ತೋರಿಸಿದ ಸುಖಾಸನಗಳಲ್ಲಿ ಕುಳಿತುಕೊಳ್ಳುವರು.)

**ಕುಂಭಕರ್ಣ.**—ಮಂತ್ರಾಗಾರದಲ್ಲಿ ಇಂದು ಅನೇಕ ಮಹತ್ವದ ಸಂಗತಿಗಳು ನಿರ್ಧರವಾಗಬೇಕಾಗಿವೆ. ಅಷ್ಟಪ್ರಧಾನರೂ, ಆಪ್ತರೂ ತಮ್ಮಿರ್ವರ ಆಗಮನವನ್ನು ನಿರೀಕ್ಷಿಸುತ್ತಿದ್ದಾರೆ.

**ವಿಭೀಷಣ.**— ಅಗ್ರಜ! ಶ್ರೀರಾಮಚಂದ್ರನು ಸಮುದ್ರಕ್ಕೆ ಸೇತುವೆಯನ್ನು ಕಟ್ಟಲು ಪ್ರಾರಂಭಿಸಿದ್ದಾನಂತೆ. ಶ್ರೀರಾಮಚಂದ್ರನು ಮಹಾವಿಷ್ಣುವಿನ ಅವತಾರ. ವೃಥಾ ದುಡುಕಿ ಫಲವಿಲ್ಲ. ಸೀತಾ ಮಾತೆಯನ್ನೊಪ್ಪಿಸಿ ಇನ್ನಾದರೂ ನಾವೆಲ್ಲರೂ ಸುಖದಿಂದಿರುವುದು ಮೇಲು.

**ಕುಂಭಕರ್ಣ.**—ರಾಮನು ಮಹಾವಿಷ್ಣುವಿನ ಅವತಾರ ವಾಗಿದ್ದರೆ, ತಾನು ಕುಳಿತ ಕಡೆಯಿಂದಲೇ ನಮ್ಮನ್ನು ಧ್ವಂಸಮಾಡ ಬಹುದಾಗಿದ್ದಿತು. ಇಲ್ಲಿಯವರೆಗೂ ಬಂದು ಆಯಾಸಪಡುವ ಆವಶ್ಯಕತೆ ಯೆಲ್ಲಿದ್ದಿತು?

**ರಾವಣ.**—ಪಶ್ಚಾತ್ತಾಪದಗ್ಧವಾದ ನನ್ನ ಹೃದಯವೇ ಮರು ಭೂಮಿಯಂತಾಗಿದೆ. ಸೀತೆಯನ್ನೊಪ್ಪಿಸಬೇಕಾಗಿ ಬಂದರೆ, ಅದರ ವಿಧಾನವೇ ಬೇರೆ. ಸೋಲನ್ನು ಶಂಕಿಸಿದ ಸತ್ತ್ವಹೀನನಂತೆ ನಾನೆಂ ದಿಗೂ ಸೀತೆಯನ್ನೊಪ್ಪಿಸೆನು. ರಾವಣನು ರಾವಣೋಚಿತವಾದ ರೀತಿ ಯಲ್ಲೇ ವರ್ತಿಸುವನೆಂಬುವನ್ನು ಮನಸ್ಸಿನಲ್ಲಿಡು.

**ಕುಂಭಕರ್ಣ.**—ಅಗ್ರಜ! ನನಗೂ ಅದೇ ಸಮ್ಮತ. ನಿನ್ನ ಉದಾತ್ತ ಬುದ್ಧಿಯನ್ನು ಲೋಕವೇ ಬಲ್ಲುದು.

**ವಿಭೀಷಣ.**—ಅಗ್ರಜ! ಪ್ರಿಯವಾದಿಗಳಾದವರು ಸುಲಭವಾಗಿ ದೊರೆಯುವರು. ಅಪ್ರಿಯವಾದರೂ ಪಥ್ಯವಾದ ವಚನಗಳನ್ನು ನುಡಿಯುವವರೂ ದುರ್ಲಭ. ಅವುಗಳಂತೆ ನಡೆಯುವವರೂ ದುರ್ಲಭ. ನೀನು ಸೀತಾಮಾತೆಯನ್ನೊಪ್ಪಿಸಿ ಶ್ರೀರಾಮಚಂದ್ರನಿಗೆ ಶರಣಾಗತನಾಗದೆ ಹೋದಲ್ಲಿ, ನಾನು ನಿನ್ನ ರಾಜ್ಯದಲ್ಲೀ ಇರುವುದಿಲ್ಲ.

**ಕುಂಭಕರ್ಣ.**—(ಹುಬ್ಬುಗಳನ್ನು ಗಂಟಿಕ್ಕಿ) ನಾನು ಪ್ರಿಯವಾದಿಯೇನೋ ನಿಜ. ಆದರೂ ನಿನ್ನಂತೆ ಜೀವಗಳ್ಳನಾಗಿ ಆಪತ್ಕಾಲದಲ್ಲಿ ಅಣ್ಣನನ್ನು ತೊರೆದು, ನಾನು ಎಲ್ಲಿಗೂ ಹೋಗುವುದಿಲ್ಲ. ಅಣ್ಣನ ಕಾರ್ಯಕ್ಕಾಗಿ ಅವಶ್ಯಬಿದ್ದಲ್ಲಿ ಈ ದೇಹವನ್ನೇ ಒಪ್ಪಿಸುವೆನು. ಹೊರಗಿನ ಸೀತಾದೇವಿಯು ಇಂದು ನಿನಗೆ ಮಾತೆಯಾದಳು. ಅಲ್ಲವೆ? ನಾನು ಅರಿತಿರುವುದು ಲಂಕಾಮಾತೆಯೊಬ್ಬಳನ್ನೇ. ಅವಳ ಸೇವೆಯಲ್ಲಿ ಸಾವೂ ನನಗೆ ಸುಖಕರ.

**ರಾವಣ.**—ವಿಭೀಷಣ! ನೀನು ಹೋಗುವುದೆಲ್ಲಿಗೆ?

**ವಿಭೀಷಣ.**—ಶ್ರೀರಾಮಚಂದ್ರನಲ್ಲಿಗೆ.

**ರಾವಣ.**—ಕೇಳಿದೆಯಾ ಮಂಡೋದರಿ? ಈ ಹೃದಯವೇದನೆಯನ್ನು ಹೇಗೆ ಸೈರಿಸಲಿ? ವಿಭೀಷಣ! ವಿಭೀಷಣ! ವೀರಮಾತೆಯ ಉದರದಲ್ಲಿ ಜನಿಸಿ ವೀರನಾಗಿ ಬಾಳಿದ ನಿನ್ನಿಂದ ಈ ಮಾತೆ? ಹೇಡಿಯಂತೆ ಶತ್ರುಪಕ್ಷವನ್ನು ಸೇರುವೆಯಾ? ಇಂತಹ ಕಳಂಕಿಗಳು ಲಂಕೆಯಲ್ಲಿ ಹುಟ್ಟದಿರಲಿ. ಇನ್ನೆಂದಿಗೂ ಹುಟ್ಟದಿರಲಿ.

**ವಿಭೀಷಣ.**—ಪರವನಿತೆಯನ್ನಪಹರಿಸಿದ ಪಾತಕಿಯಾದ ನಿನ್ನ ರಾಜ್ಯದಲ್ಲಿ ನಾನು ಕ್ಷಣಮಾತ್ರವೂ ನಿಲ್ಲಲಾರೆ. ನೀನು ದೈವದ್ರೋಹಿ; ದೇಶದ್ರೋಹಿ; ಆತ್ಮದ್ರೋಹಿ. ಕಳಂಕಿಯು ನಾನಲ್ಲ.

**ಮಂಡೋದರಿ.**—ಮರ್ಯಾದೆಯ ಮೇರೆಯನ್ನು ಮೀರಿದ ಬಿರುನುಡಿಗಳಿವು. ವಿಭೀಷಣ! ಇವೆಂದಿಗೂ ನಿನಗೆ ತರವಲ್ಲ. ಸಹನವೇ ಶೌರ್ಯಕ್ಕೆ ಭೂಷಣವೆಂಬುದನ್ನು ಆರ್ಯಪುತ್ರನು ಬಲ್ಲನು. ಮೊದಲೇ ನೊಂದಿರುವವನನ್ನು ಮತ್ತಷ್ಟು ನೋಯಿಸಿ ನುಡಿಯುವುದು ತರವಲ್ಲ. ಅವನು ನಮ್ಮೆಲ್ಲರಿಗೂ ಪ್ರಭು. ಸ್ವಯೂಥ ಕಲಹದಿಂದ ಸರ್ವನಾಶವೇ ಫಲ. ನಂದನವನದಂತಹ ರಾಜ್ಯಗಳು ನಿರ್ನಾಮವಾಗಿ ದಾಸ್ಯ ಶೃಂಖಲೆಗೆ ಗುರಿಯಾಗುವುದು ಅದರಿಂದಲೇ.

**ರಾವಣ.**—ವಿಭೀಷಣ! ಹೋಗು! ನಾನು ಬೇಡವೆನ್ನುವುದಿಲ್ಲ. ಹೋಗು. ಆದರೆ ರಾಮನ ಬಳಿಗೆ ಬೇಡ. ಕುಬೇರನ ರಾಜ್ಯಕ್ಕಾದರೂ ಹೋಗಿ ಸುಖವಾಗಿ ಬಾಳು.

**ವಿಭೀಷಣ.**—ಒಲ್ಲೆನು, ಹಾಗೆ ಮಾಡಲೊಲ್ಲೆನು.

**ಕುಂಭಕರ್ಣ.**—ಒಲ್ಲೆಯಾದರೆ ಈಗಲೇ ಹೊರಡು.

**ರಾವಣ.**—ಈ ರಾವಣನು ಮುನಿದರೆ, ಅವನಿಗೆ ಎದುರು ಮಾತನಾಡಿ ಬದುಕಿದವರಿಲ್ಲ. ಒಮ್ಮೆ ನಿನ್ನನ್ನು ಕಾರಾಗೃಹವಾಸಕ್ಕೆ ಗುರಿಮಾಡಿದ ಪರಿತಾಪದಿಂದಲೇ ಇನ್ನೂ ಹಿಂಸೆಪಡುತ್ತಿದ್ದೇನೆ. ನಿನ್ನನ್ನು ದಂಡಿಸಲು ಮನಸ್ಸುಬಾರದು. ಹೇಡಿ! ಪ್ರಭುದ್ರೋಹಿ! ನನಗೆ ಮುಖವನ್ನು ತೋರಿಸಬೇಡ. ಹೊರಡು. ನಡೆ. (**ವಿಭೀಷಣನು ಹೊರಟುಹೋದಮೇಲೆ, ಚಿಂತಾಕ್ರಾಂತನಾಗಿ ತಲೆ ತಗ್ಗಿಸಿ ನಿಟ್ಟುಸಿರುಬಿಟ್ಟು**) ವತ್ಸ! ಕುಂಭಕರ್ಣ! ಇನ್ನು ನೀನೇ ನನ್ನ ಮುಖ್ಯಾವಲಂಬನ........ ಮಂತ್ರಾಗಾರದಲ್ಲಿ ಎಲ್ಲರೂ ಕಾದಿರುವರಲ್ಲವೆ? ಮಂತ್ರಾಗಾರಕ್ಕೆ ನಾಳೆ ಬರುವೆನೆಂದು ಸಚಿವರೆಲ್ಲರಿಗೂ ತಿಳಿಸು. ವಿಭೀಷಣನೇನು ಮಾಡುವನೆಂಬುದನ್ನು ಗೂಢಚಾರರಿಂದ ತಿಳಿದುಕೊಳ್ಳಬೇಕೆಂದು ಮಹೋದರನಿಗೆ

ಹೇಳು. ವಿಷಯವು ಅತ್ಯಂತ ರಹಸ್ಯವಾಗಿರಬೇಕಾದುದು. (**ಕುಂಭಕರ್ಣನು ರಾವಣ ಮಂಡೋದರಿಯರಿಗೆ ವಂದಿಸಿ ತೆರಳಿದ ಬಳಿಕ**) ಅಯ್ಯೋ! ಇನ್ನೂ ಯಾವ ಯಾವ ಕೇಡುಗಳು ಕಾದಿವೆಯೋ!

**ಮಂಡೋದರಿ.**—ಪ್ರಾಣೇಶ್ವರ! ಹೀಗೇಕೆ ಚಿಂತಿಸುವೆ? ಆಗು ಹೋಗುಗಳು ಕೇವಲ ದೇವಾಯತ್ತ. ಪೌರುಷದಿಂದ ಹೆಣಗುವುದು ನಮ್ಮ ಅಧೀನ. ಶೂರನಿಗೆ ಸುಖವು ಕರಗತವಲ್ಲವೆ!

**ರಾವಣ.**—ಅಯ್ಯೋ! ಸುಖದ ದಿನಗಳು ಇನ್ನೆಲ್ಲಿ? ನನ್ನ ಸೊಬಗಿನ ದಿನಗಳು ಇನ್ನೆಲ್ಲಿ? ದೇಶಮಾತೆಗೆ ಭಾರ! ಬಂಧುಗಳಿಗೆ ಭಾರ! ಕುಲಕ್ಕೆ ಭಾರ! ಪ್ರಜೆಗಳಿಗೆ ಭಾರ! ನನ್ನ ಜೀವಿತವು ನನಗೇ ಭಾರ!

**ಮಂಡೋದರಿ.**—ಪ್ರಿಯನೇ! ನಿನ್ನ ದುಃಖವನ್ನು ನೋಡಿ ನನ್ನ ಹೃದಯವೇ ಕಿತ್ತುಬರುತ್ತದೆ. ಪ್ರಾಣೇಶ್ವರ! ನನ್ನ ಪ್ರಾರ್ಥನೆಯನ್ನು ಲಾಲಿಸು. ಕಾಯವಳಿದರೂ ಕೀರ್ತಿಯುಳಿಯುವಂತೆ ವರ್ತಿಸು. ಕೈಲಾಸವನ್ನು ತೂಗಿ ಪವಿತ್ರವಾಗಿರುವ ತೋಳುಗಳಲ್ಲಿ ತಂಗಿಯ ಭಾವನೆಯಿಂದ ಸೀತೆಯನ್ನೆತ್ತಿಕೊಂಡು ಹೋಗಿ ರಾಘವನಿಗೆ ಸಮರ್ಪಿಸು. ದಾನವರಾಜ್ಯವೇ ದೈವೀಸಂಪದದ ನೆಲೆಯೆನಿಸುವಂತೆ ಚಿರಕಾಲ ಪ್ರಭುತ್ವಮಾಡು. ಪವಿತ್ರತೆಯಲ್ಲಿ ಲಂಕೆಯನ್ನೇ ಕೈಲಾಸಕ್ಕೆ ಸರಿಮಾಗಿಸಿ, ಧರ್ಮಪರಾಯಣತೆಯಿಂದ ಧನ್ಯನಾಗು. ಆಗ್ಗೆ ಎಲ್ಲವೂ ಸರಿಹೋಗುವುದು. ಕೈಲಾಸದ ಕೈವಲ್ಯವೇ ಮರ್ತ್ಯಲೋಕಕ್ಕಿಳಿದು ಬರುವುದು. ಒಟ್ಟು ಸೃಷ್ಟಿಯೇ ರಾವಣೇಶ್ವರನ ಯಶೋಗೀತೆಯನ್ನು ಹಾಡಿ ಆನಂದಿಸುವುದು. ಆರ್ಯಪುತ್ರ! ಆತ್ಮ ತೇಜಸ್ಸಿನ ವೈಭವವೊಂದಿದ್ದರೆ ಯಾವುದು ತಾನೆ ಅಸಾಧ್ಯ?

**ರಾವಣ.**— (ಸಂತಾಪ ಸಮ್ಮಿಶ್ರಿತವಾದ ಸಂತೋಷದಿಂದ) ನೀನೇ ಲಂಕಾ ರಾಜ್ಯದ ಬೆಳಕು. ನೀನು ನನ್ನ ಗೃಹಲಕ್ಷ್ಮಿಯು ಮಾತ್ರವೇ ಅಲ್ಲ. ನನ್ನ ರಾಜ್ಯ ಲಕ್ಷ್ಮಿಯೂ ಆಗಿರುವೆ. ಮಂಡೋದರಿ! ಚಿಂತಿಸುವೆನು, ಚಿಂತಿಸುವೆನು. ಋಜುತೆಯನ್ನು ಕುರಿತು ಚಿಂತಿಸುವೆನು. ನನ್ನ ಹೃದಯವೇ ಕಲಕಿಹೋದಂತಾಗಿದೆ. ಈಗ ಏನನ್ನು ಹೇಳುವುದಕ್ಕೂ ತೋರದು. (ಭೇರೀ ರವವು ಕೇಳಿಸುವುದು) ಶಿವಪೂಜಾ ಕಾಲವು ಸಮೀಪಿಸಿತು. (ಪೂಜಾಸಾಮಗ್ರಿಗಳೊಡನೆ ಪುರೋಹಿತನು ಬರುವನು. ರಾವಣನ ಕೈಗೆ ಅವನು ಜೇಡಿಯ ಮಣ್ಣನ್ನು ಸಮರ್ಪಿಸುವನು. ನೇಪಥ್ಯದಲ್ಲಿ ಶಿವಸ್ತುತಿಯ ಗೀತಿಕೆಯನ್ನು ಹಾಡುತ್ತಿರುವಲ್ಲಿ, ರಾವಣನು ಪೂಜೆಗೆ ಪಾರ್ಥಿವ ಲಿಂಗವನ್ನು ರಚಿಸಿ ಸಿದ್ಧಗೊಳಿಸಿಕೊಳ್ಳುವನು.)

**ಮಂಡೋದರಿ.**—ಆರ್ಯಪುತ್ರ! ಯೋಚಿಸಿನೋಡು. ನನ್ನ ಪ್ರಾರ್ಥನೆಯನ್ನು ಲಾಲಿಸಿ ಶ್ರೇಯೋರಾಶಿಯನ್ನು ಗಳಿಸಿ ಆನಂದಿಸು. ಲೋಕೇಶನಾದ ಆ ಶಿವನೇ ನಮ್ಮನ್ನು ಕಾಪಾಡಬೇಕು.

(ತೆರೆಯು ಬೀಳುವುದು.)

---

## ದೃಶ್ಯ ೪

[ಲಂಕಾನಗರಕ್ಕೆ ಬಹುದೂರದಲ್ಲಿ ಶ್ರೀರಾಮಚಂದ್ರನ ಶಿಬಿರಕ್ಕೆ ಹೋಗುವ ದಾರಿ. ಜಾಂಬವನೂ, ಕಪಿವೀರರೂ, ವಿಭೀಷಣನೂ ಪ್ರವೇಶಿಸುವರು. ಸಮಯ: ರಾತ್ರಿ ಸರಿಹೊತ್ತಿಗೆ ಸ್ವಲ್ಪ ಮುಂಚೆ.]

**ಸುಷೇಣ.**—(ಪ್ರವೇಶಿಸಿ) ನಾನು ಹೇಳಿದ ಮೂಲಿಕೆಗಳನ್ನು ತಂದಿರುವಿರಾ? ಅವು ಸಿಕ್ಕಿದುವೆ? ಜಾಂಬವ! ನೀನೂ ಹೋಗಿದ್ದೆಯೇನು?

**ಜಾಂಬವ.**—ಇಲ್ಲ. ಎಲ್ಲಪ್ಪ! ನನ್ನಂಥ ಮುದುಕ ಹೋಗೋ ಕಾಗುತ್ತೆಯೆ? ನೀನು ಲಕ್ಷ್ಮಣಸ್ವಾಮಿಯ ಜೀವವನ್ನುಳಿಸಿದುದಕ್ಕಾಗಿ ನಿನಗೆ ನಾವೆಲ್ಲರೂ ಎಷ್ಟು ಕೃತಜ್ಞರಾಗಿದ್ದರೂ ಸಾಲದೆಂದು ಮಾತ ನಾಡುತ್ತ ನಾನೂ, ವಿಭೀಷಣನೂ ಇಲ್ಲಿಯೇ ಸಂಚರಿಸುತ್ತಿದ್ದೆವು. ಅಷ್ಟ ರಲ್ಲಿ, ಕಪಿವೀರರು ಮೂಲಿಕೆಗಳನ್ನು ತಂದರು. ಹುಡುಗರಿರುವಾಗ ನನ್ನಂಥ ಮುದುಕನಿಗೆ ವಿರಾಮವೇ ತಾನೆ?

**ಸುಷೇಣ.**—ಚೆನ್ನಾಗಿ ಹೇಳಿದೆ! ನಿನ್ನಷ್ಟು ಕೆಲಸಮಾಡಲು ಅವರ ಹಣೆಯಲ್ಲೇ ಬರೆದಿಲ್ಲ. ಮಂತ್ರಾಲೋಚನೆಯಲ್ಲಂತೂ, ನಿನ್ನ ಹೆಸರನ್ನು ಹೇಳಿದ ಮಾತ್ರಕ್ಕೇ, ಎಲ್ಲ ತೊಂದರೆಗಳೂ ನಿವಾರಣೆಯಾಗು ವುವು. ಲಕ್ಷ್ಮಣ ದೇವನ ಪ್ರಾಣವು ಉಳಿದುದು ಮಾರುತಿಯಿಂದ. ಅವನು ಅಮೃತ ಸಂಜೀವಿನಿಯನ್ನು ತಾರದೆ ಹೋಗಿದ್ದರೆ ಲಕ್ಷ್ಮಣ ದೇವನು ಉಳಿಯುತ್ತಿರಲೇ ಇಲ್ಲ.

**ವಿಭೀಷಣ.**—ಏನೇ ಆಗಲಿ. ನಿಮ್ಮಿಬ್ಬರ ಸಾಹಸದಿಂದ ರಾಮ ಕಾರ್ಯಕ್ಕೆ ಸಹಾಯವಾಯಿತು.

**ಸುಷೇಣ.**—ಕಪಿವೀರರೆ, ಮೂಲಿಕೆಗಳನ್ನು ಇಲ್ಲಿ ಕೊಡಿ. (ನೀಲನೂ, ಅಂಗದನೂ ಮೂಲಿಕೆಗಳನ್ನು ಸುಷೇಣನ ಕೈಗೆ ಕೊಟ್ಟು ನಮಸ್ಕರಿಸುವರು. ಸುಷೇಣನು "ದೀರ್ಘಾಯುಷ್ಮಾನ್ ಭವ" ಎಂದು ಹೇಳಿ ಹರಸುವನು. ಅವರೀರ್ವರೂ ನಮಸ್ಕರಿಸಿ ಮೇಲಕ್ಕೆದ್ದ ಮೇಲೆ) ಅಂಗ ದನೂ, ನೀಲನೂ ಕಪಿಗಳಿಗೆ ಮುಂದಾಳುಗಳಾಗಿ ಹೊರಟಮೇಲೆ ಯಾವ ಕಾರ್ಯವು ತಾನೆ ಸಿದ್ಧಿಸುವುದಿಲ್ಲ?

**ಆಂಜನೇಯ.**—(ಪ್ರವೇಶಿಸಿ) ಸುಷೇಣ! ಗಾಯಹೊಂದಿದ ಕಪಿವೀರರು ಸಂಕಟಪಡುತ್ತಿದ್ದಾರೆ. ಮೂಲಿಕೆಗಳು ಸಿಕ್ಕಿದುವೆ? (ಸುಷೇಣನ ಕೈಗಳನ್ನು ನೋಡಿ) ಇದೋ ದೊರೆತಿರುವಂತಿದೆ.

**ಸುಷೇಣ.**—ಈ ಮೂಲಿಕೆಗಳಿಂದ ಕಪಿವೀರರಿಗೆ ಪೂರ್ಣಾರೋಗ್ಯವು ಲಭಿಸುತ್ತದೆ. ನಾವೀರ್ವರೂ ಹೋಗೋಣ ನಡೆ.

(ಆಂಜನೇಯನೂ, ಸುಷೇಣನೂ ಹೊರಟುಹೋಗುವರು.)

**ಜಾಂಬವ.**—ಅಂಗದ! ರಾವಣನು ಇಂದು ಕೂಡ ಯುದ್ಧ ಮಾಡದೆ ಸುಮ್ಮನಿದ್ದುದಕ್ಕೆ ಗೂಢಚಾರರಿಂದ ಕಾರಣವೇನಾದರೂ ತಿಳಿಯಿತೆ?

**ಅಂಗದ.**—ತಿಳಿಯಿತು. ರಾವಣನು ಲಕ್ಷ್ಮಣನ ಮೇಲೆ ಪ್ರಯೋಗಮಾಡಿದ ಶಕ್ತ್ಯಾಯುಧಕ್ಕಿಂತ ಹೆಚ್ಚಿನ ದಿವ್ಯಾಸ್ತ್ರಗಳನ್ನು ಪಡೆದುಕೊಳ್ಳಲು ಮಕರಂದೋದ್ಯಾನದಲ್ಲಿ ದೇವಿಯನ್ನು ಕುರಿತು ತಪಸ್ಸನ್ನಾಚರಿಸುತ್ತಿದ್ದಾನಂತೆ. ಆದುದರಿಂದ ಯುದ್ಧದ ಪ್ರಸಕ್ತಿಯೇ ಇಲ್ಲ.

**ನೀಲ.**—ಅಷ್ಟೇ ಅಲ್ಲ. ಅವನ ಉದ್ದೇಶವೇನಾದರೂ ಈಡೇರಿದರೆ, ಆ ಬಳಿಕ ಅವನು ಅಜೇಯನಾಗುವನು. ನಾವು ಏನಾದರೂ ಸಾಹಸ ಮಾಡಿ ಅವನ ತಪಸ್ಸಿಗೆ ವಿಘ್ನವನ್ನಾಚರಿಸಬೇಕು.

**ಅಂಗದ.**—ನಮಗೆ ಮಕರಂದೋದ್ಯಾನದ ಮಾರ್ಗವು ತಿಳಿಯದು. ವಿಭೀಷಣನು ಮಾರ್ಗವನ್ನು ತೋರಿಸಿದರೆ, ನಮ್ಮ ಕಾರ್ಯವು ಸಿದ್ಧಿಸುವುದು.

**ನೀಲ.**—ನಾವು ಆಲಸ್ಯಮಾಡಿದರೆ, ಇಷ್ಟು ದೀರ್ಘಕಾಲ ಘೋರವಾಗಿ ಯುದ್ಧಮಾಡಿದುದೂ ವಿಫಲವಾಗುವುದು. ಇಂದು ರಾತ್ರಿಯೇ ನಾವು ಅವನ ತಪಸ್ಸಿಗೆ ಭಂಗವನ್ನುಂಟುಮಾಡಬೇಕು.

**ಜಾಂಬವ.**—ರಾವಣನ ತಪಸ್ಸಿಗೆ ಭಂಗವನ್ನುಂಟುಮಾಡಲು ಹೋಗುವುದೆಂದರೆ, ಕಾಲಯಮನ ದವಡೆಯನ್ನು ಕೀಳುವುದಕ್ಕೆ

ಹೋದಂತೆ. ಪ್ರಾಣದಮೇಲೆ ಆಸೆಯನ್ನು ತೊರೆದೇ ಆ ಕೆಲಸಕ್ಕೆ ಕೈಹಾಕಬೇಕು. ತಿಳಿಯಿತೊ ?

**ಕಪಿವೀರರೆಲ್ಲರೂ.**—ಜಯ ರಘುವೀರ, ಜಯ ರಘುವೀರ! ಸ್ವಾಮಿಕಾರ್ಯದಲ್ಲಿ ನಮಗೆ ಪ್ರಾಣವು ತೃಣ ಸಮಾನ. ಜಯವಾಗಲಿ ಶ್ರೀರಾಮಚಂದ್ರನಿಗೆ.

**ವಿಭೀಷಣ.**—(ಜಾಂಬವನನ್ನು ಕಪಿವೀರರಿಗೆ ಸ್ವಲ್ಪ ದೂರವಾಗಿ ಕರೆದೊಯ್ದು) ಈ ವಿಚಾರವನ್ನು ಶ್ರೀರಾಮನಿಗೆ ಶ್ರುತಪಡಿಸಿ ಅವನ ಅಪ್ಪಣೆಯನ್ನು ಪಡೆಯುವುದು ನಮ್ಮ ಕರ್ತವ್ಯವಲ್ಲವೆ?

**ಕಪಿವೀರರಲ್ಲೊಬ್ಬ.**—(ಅವರೀರ್ವರ ಸಮೀಪಕ್ಕೆ ಬಂದು) ಮಕರಂದೋದ್ಯಾನಕ್ಕೆ ಮಾರ್ಗವನ್ನು ತೋರಿಸುವುದಾಗಿ ವಿಭೀಷಣನು ಉತ್ತರ ಹೇಳಲಿಲ್ಲ. ಅಣ್ಣನ ಕಡೆಯ ಪಕ್ಷಪಾತವು ಅವನ ಮನಸ್ಸಿನಿಂದ ಹೋಗಿಲ್ಲವೆಂಬುವನ್ನು ನಾವೆಲ್ಲರೂ ಆಗಲೇ ಅರಿತೆವು. ಈ ಏಕಾಂತವೇಕೆ?

**ಜಾಂಬವ.**—ವೀರರೇ! ವೃಥಾ ಮಡುಕಬೇಡಿ. ವಿಭೀಷಣನ ನಿಜಸ್ವಭಾವವು ನಿಮಗೆ ತಿಳಿಯದು.

**ವಿಭೀಷಣ.**—ಕಪಿವೀರರೇ! ನಿಮ್ಮ ಸಂಶಯವನ್ನು ನಾನು ಬಲ್ಲೆ. ಆಂಜನೇಯನು ಭರವಸೆಕೊಡದೆ ಹೋಗಿದ್ದರೆ, ಶ್ರೀರಾಮನಲ್ಲಿ ನನಗೆ ಆಶ್ರಯವು ದೊರೆಯಲು ಮಾರ್ಗವೇ ಇರಲಿಲ್ಲ.

**ಅಂಗದ.**—ನಿಜ. ಅಣ್ಣನನ್ನೂ ತೊರೆದು, ಜಗದ್ವಂದ್ಯಳೆನಿಸಿರುವ ಮಂಡೋದರೀ ದೇವಿಯ ಯೋಗಕ್ಷೇಮವನ್ನೂ ಅಲಕ್ಷ್ಯಮಾಡಿ, ಜನ್ಮಭೂಮಿಯನ್ನು ಬಿಟ್ಟು ಬಂದವನು ನಂಬಿಕೆಗೆ ಅರ್ಹನೆಂದು ಭಾವಿಸುವ ಬಗೆ ಹೇಗೆಂದು ನಮ್ಮಲ್ಲಿ ಕೆಲವರು ಆಕ್ಷೇಪಿಸಿದೆವು.

**ನೀಲ.**—ಮಕರಂದೋದ್ಯಾನಕ್ಕೆ ನೀನು ಮಾರ್ಗವನ್ನು ತೋರಿಸಿದರಂತೂ ಸಂತೋಷ. ಇಲ್ಲವಾದರೆ ನಾವೇ ಹೋಗಿ ಹುಡುಕುವೆವು. ನಿನಗೆ ಇಷ್ಟವಿಲ್ಲದಿದ್ದರೆ ನೀನು ಮಾರ್ಗವನ್ನು ತೋರಿಸಬೇಕಾದ ಪ್ರಕೃತವೇ ಇಲ್ಲ.

**ವಿಭೀಷಣ.**—ಶ್ರೀರಾಮಚಂದ್ರನಲ್ಲಿ ನನಗೆ ಅಚಲವಾದ ಭಕ್ತಿಯುಂಟು. ಸ್ವಾಮಿ ಭಕ್ತಿಯಲ್ಲಿ ನಾನು ಯಾರಿಗೂ ಕಡಿಮೆಯಿಲ್ಲ. ಆದರೂ, . . . . . . .

**ನೀಲ.**—ಅಣ್ಣನಲ್ಲಿ ಪ್ರೇಮವೇನೊ! ಬಾಯಿಬಿಟ್ಟು ಹೇಳು.

**ವಿಭೀಷಣ.**—ಆತನು ಸಂಯಮಿಶ್ರೇಷ್ಠನು. ಹಿಂದೆ ಶಿವನನ್ನು ಒಲಿಸಿಕೊಂಡವನವನು. ಆದುದರಿಂದ, ಆತನ ತಪಸ್ಸನ್ನು ಭಂಗಗೊಳಿಸುವುದು ಅಸಾಧ್ಯವೇ ಸರಿ.

**ಅಂಗದ.**—ಅದು ಅಸಾಧ್ಯವಷ್ಟೆ?

**ವಿಭೀಷಣ.**—ಅಸಾಧ್ಯ.

**ಅಂಗದ.**—ಹಾಗಾದಲ್ಲಿ ಸಂಶಯವೇಕೆ? ನಮಗೆ ಮಾರ್ಗವನ್ನು ತೋರಿಸು. ಹೇಗೂ ರಾವಣನ ತಪೋಭಂಗವಾಗುವಹಾಗಿಲ್ಲ. ನಾವು ಅಲ್ಲಿಗೆ ಹೋಗಿ ಬರುವುದರಿಂದ ನಷ್ಟವೇನು? ಲಂಕೆಯವರನ್ನು ಕಂಡಾಗ ನೀನು ವರ್ತಿಸುವ ರೀತಿಯನ್ನು ಕಂಡು, ನೀನು ಶತ್ರುಪಕ್ಷದವನೆಂಬ ಈಗ ನಮ್ಮ ಮನಸ್ಸಿನಲ್ಲಿರುವ ಸಂಶಯವಾದರೂ ಹೋಗಲಿ. ನಡೆ; ಅಲ್ಲಿಗೆ ಹೋಗೋಣ.

**ವಿಭೀಷಣ.**—ಆಗಬಹುದು.

**ಕಪಿವೀರರೆಲ್ಲರೂ.**—ಜಯ ರಘುವೀರ!

(ಎಲ್ಲರೂ ತೆರಳುವರು.)

---

## ದೃಶ್ಯ ೫

[ಮಕರಂದೋದ್ಯಾನದ ಒಂದು ಭಾಗ. ತೆರೆಯು ಮೇಲಕ್ಕೆ ಹೋಗುತ್ತಿರುವಲ್ಲಿ "ಓಂ, ಓಂ, ಓಂ" ಎಂಬ ನಾದವನ್ನು ಹೋಲುವಂತೆ ಮಧುರ ತಾನದಲ್ಲಿ ನಗಾರಿಯು ಮೃದುಸ್ವನದಿಂದ ಮೊಳಗುತ್ತಿರುವುದು. ಸಮಯ : ಸಮರಾತ್ರಿ. ಕಿರೀಟಧಾರಿಣಿಯಾಗಿ ಖಡ್ಗಹಸ್ತೆಯಾಗಿರುವ ಮಂಡೋದರಿಯು ಪ್ರವೇಶಿಸುವಳು.]

**ಮಂಡೋದರಿ.**—ಕಡುಗಲಿಯಾದ ಲಕ್ಷ್ಮಣನನ್ನು ಕೂಡ ಶಕ್ತ್ಯಾಯುಧ ಪ್ರಯೋಗದಿಂದ ಮೂರ್ಛೆಗೊಳಿಸಿದ ಆರ್ಯಪುತ್ರನು ವೀರಶ್ರೀಯ ವರಪುತ್ರನಂತಿರುವನು. ಅವನು ಧ್ಯಾನದಿಂದೆಚ್ಚತ್ತು ಬರುವವರೆಗೂ ಇಲ್ಲಿಯೇ ಕಾಯ್ದು ನಿಂತಿರುವೆನು. ಆರ್ಯಪುತ್ರನು ಆದಿಶಕ್ತಿಯನ್ನು ಒಲಿಸಿಕೊಳ್ಳುವವರೆಗೂ ಅವನ ಅಂಗರಕ್ಷಕಳಾಗಿ ನಿಂತಿರುವೆನು. ಪತಿ ಸೇವಾ ಭಾಗ್ಯಕ್ಕೆ ಸಮಾನವಾದುದು ಈ ಜಗತ್ತಿನಲ್ಲುಂಟೆ? ಪತಿ ಪ್ರೇಮವೇ ಸ್ತ್ರೀ ಜೀವನದ ಅಮೃತಧಾರೆ. **(ನೇಪಥ್ಯದ ಕಡೆಗೆ ನೋಡಿ)** ಯಾರು ಈ ಮಾರ್ಗವಾಗಿ ಬರುತ್ತಿರುವವರು? ಇಷ್ಟು ಬೆಳದಿಂಗಳಿದ್ದೂ ಗುರುತಿಸುವುದು ಕಷ್ಟವಾಗಿದೆ. ಸಮೀಪಕ್ಕೆ ಬಂದರು....ವಿಭೀಷಣ....ಕೆಲವರು ಕಪಿವೀರರು. ಇವರು ಇಲ್ಲಿಗೇತಕ್ಕೆ ಬಂದಿರುವರು !

**(ವಿಭೀಷಣನೂ, ಕೆಲವು ಕಪಿವೀರರೂ ಪ್ರವೇಶಿಸುವರು.)**

**ವಿಭೀಷಣ.**—(ಮಂಡೋದರಿಗೆ ನಮಸ್ಕರಿಸಿ) ತಾಯೆ ! ಇದೇನು ಈ ವೇಷವನ್ನು ಧರಿಸಿರುವೆ? ಅಬಲೆಯಾದ ನೀನು ಖಡ್ಗಧಾರಿಣಿಯಾಗಿ ಒಬ್ಬಳೇ ನಿಂತಿರುವೆ?

**ಮಂಡೋದರಿ.**—ಸಬಲರು ಶತ್ರುಪಕ್ಷವನ್ನು ಸೇರಿದಮೇಲೆ ಅಬಲೆಯು ಅವರ ಸ್ಥಾನವನ್ನು ಆಕ್ರಮಿಸಿದಳು. ಖಡ್ಗವನ್ನು ಧರಿಸಿದಳು. ಅದರಲ್ಲಿ ಆಶ್ಚರ್ಯವೇನು?

**ವಿಭೀಷಣ.**—ಸಬಳದ ಮೊನೆಯಿಂದ ಇರಿಯುವಂತಹ ಮಾತು.

**ಮಂಡೋದರಿ.**—ರಾವಣೇಶ್ವರ ಭೂಪಾಲನನ್ನು ಕುರಿತು ನೀನು ನುಡಿದ ಮಾತುಗಳಿಗಿಂತಲೆ?

**ವಿಭೀಷಣ.**—ಅವನು ಪಾತಕಿ; ದ್ರೋಹಿ.

**ಮಂಡೋದರಿ.**—ಬಾಲ್ಯದಿಂದಲೂ ಪೋಷಿಸಿದ ಪ್ರಭುವನ್ನು, ಆದರ್ಶ ಸಮ್ರಾಟನಾದ ಅಣ್ಣನನ್ನು, ಬಿಟ್ಟು ಶತ್ರುಪಕ್ಷವನ್ನು ಸೇರಿ ದವನೋ?

**ವಿಭೀಷಣ.**—ಪಾಪ ಕೃತ್ಯಕ್ಕೆ ನೀನೂ ಒತ್ತಾಸೆಯಾಗುವೆ ಯೆಂದು ನಾನು ಕನಸಿನಲ್ಲಿಯೂ ನಂಬಿರಲಿಲ್ಲ.

**ಮಂಡೋದರಿ.**— ನಾನು....ಪಾಪಕ್ಕೆ ಒತ್ತಾಸೆಯಾಗುವವಳು? ....ವಿಭೀಷಣ! ನೀನು ಕುಸುಮದಂತೆ ಮೃದುವಾದ ಮಾತುಗಳ ನ್ನಾಡುವವನು, ಅಲ್ಲವೆ? ನಡೆಯುವವನು ಒಮ್ಮೆ ಕಾಲುಜಾರುವು ದುಂಟು. ಆರ್ಯಪುತ್ರನು ಒಂದು ಅಪರಾಧವನ್ನೇನೋ ಆಚರಿಸಿ ದನು. ಆದರೂ ಉಳಿದ ಎಲ್ಲ ವಿಚಾರಗಳಲ್ಲಿಯೂ ಅವನು ಆದರ್ಶ ಪುರುಷನಲ್ಲವೆ? ಜಗತ್ತಿಗೇ ಅವನು ಭೂಷಣಪ್ರಾಯನಾಗಿಲ್ಲವೆ?

**ವಿಭೀಷಣ.**—ಒಂದು ಮಸಿಯ ಬೊಟ್ಟು ಒಟ್ಟು ಚಿತ್ರವನ್ನೇ ನುಂಗುತ್ತದೆ.

**ಮಂಡೋದರಿ.**—ಆ ಮಸಿಯ ಬೊಟ್ಟೇ ಮಾಯವಾದರೊ? ಜೀವನದ ಕಪ್ಪು ತೇಲಿ ಸಾತ್ವಿಕತೆಯ ಕುಡಿಮಿಂಚುಗಳು ಮೂಡಿ ದರೊ? ........ಪಶ್ಚಾತ್ತಾಪದಿಂದ ಪರಿಹಾರವಾಗದ ಪಾತಕವೇ ಇಲ್ಲ.

**ವಿಭೀಷಣ.**—ಅದು ಸಾಧ್ಯವೇ ಇಲ್ಲ. ಒಂದುವೇಳೆ ಸಾಧ್ಯವಿದ್ದರೂ, ದೋಷದ ದುರ್ಯಶವೆಂದಿಗೂ ಹೋಗದು.

**ಮಂಡೋದರಿ.**—ಹಾಗಾದರೆ ಒಮ್ಮೆ ಹಿಂಸ್ರಪಶುವಿನಂತೆ ದಾಂಧಲೆ ಮಾಡುತ್ತಿದ್ದ ಬಲಿಚಕ್ರವರ್ತಿಯು ಈಗ ಭಾಗವತ ಶಿರೋಮಣಿಯೆಂದು ಪ್ರಖ್ಯಾತನಾಗಿರುವ ಬಗೆ ಹೇಗೊ? ಈ ಜಿಜ್ಞಾಸೆಯು ಹಾಗಿರಲಿ. ನೀನು ಇಲ್ಲಿಗೇತಕ್ಕೆ ಬಂದೆ?

**ವಿಭೀಷಣ.**—ಸ್ವಾಮಿ ಕಾರ್ಯಕ್ಕಾಗಿ.

**ಮಂಡೋದರಿ.**—(ಸಂತೋಷವನ್ನು ಸೂಚಿಸಿ) ನಿಜವಾಗಿಯೂ! ವಿಭೀಷಣ, ರಾವಣೇಶ್ವರನ ಸೇವೆಗಾಗಿ ಬಂದಿರುವೆಯಾ?

**ವಿಭೀಷಣ.**—ಶ್ರೀರಾಮಚಂದ್ರನೇ ನನ್ನ ಸ್ವಾಮಿ. ಆಂಜನೇಯನು ಬಹಳ ಶ್ರಮಪಟ್ಟು ಸಕಾಲಕ್ಕೆ ಸಂಜೀವನ ಪರ್ವತವನ್ನು ತಂದನು. ಸುಷೇಣನು ವೈದ್ಯಮಾಡಿದನು. ಇಲ್ಲದೆಹೋಗಿದ್ದರೆ, ರಾವಣನಿಂದ ಘಾಸಿಪಟ್ಟ ಲಕ್ಷ್ಮಣನು ಈ ವೇಳೆಗೆ ಬದುಕಿಯೇ ಇರುತ್ತಿರಲಿಲ್ಲ. ರಾವಣನು ಧ್ಯಾನಮಗ್ನನಾಗಿರುವುದನ್ನು ತಿಳಿದೆವು.

**ಮಂಡೋದರಿ.**—(ಕೋಪದಿಂದ) ರಾವಣ....ರಾವಣ....ಶತ್ರುಪಕ್ಷವನ್ನು ಸೇರಿದಮೇಲೆ ರಾವಣನು ಅಣ್ಣನೆಂಬುದನ್ನೂ ಮರೆತೆಯಲ್ಲವೆ? ಲಂಕೆಯಲ್ಲಿ ಎಂತಹ ಪಾತಕಿಗಳು ಬೇಕಾದರೂ ಹುಟ್ಟಲಿ. ದೇಶ ದ್ರೋಹಿಗಳು ಮಾತ್ರ ಹುಟ್ಟದಿರಲಿ!

**ವಿಭೀಷಣ.**—ಪಾತಕಿಯಾದ ರಾವಣನಂತಹ ಪ್ರಭುಗಳು ಹುಟ್ಟದರೆ ಸಾಕೊ?

**ಮಂಡೋದರಿ.**—ಆರ್ಯಪುತ್ರನು ಪಾಪಕಾರ್ಯವನ್ನೆಸಗಿದ್ದರೂ, ರಾಜಧರ್ಮವನ್ನು ಅಲಕ್ಷ್ಯಮಾಡಿಲ್ಲ. ಪ್ರಜೆಗಳ ಅಭ್ಯುದಯ

ಕ್ಕಾಗಿ ಸಂತತವೂ ಶ್ರಮಿಸುತ್ತಲೇ ಇದ್ದಾನೆ....ಹೋಗಲಿ....ನೀನು ಬಂದ ಮಹತ್ಕಾರ್ಯವೇನೊ ?

**ವಿಭೀಷಣ.**—ಅದನ್ನು ಆಲಿಸಿ ಕೇಳು. ರಾವಣನು ಧ್ಯಾನ ವಿಮುಖನಾಗುವಂತೆ ಮಾಡಲು ನಾನೂ, ಈ ಕಪಿವೀರರೂ ಇಲ್ಲಿಗೆ ಬಂದಿದ್ದೇವೆ.

**ಮಂಡೋದರಿ.**—(ಅಸಹ್ಯವನ್ನು ಸೂಚಿಸಿ) ವಿಭೀಷಣ ! ಈ ಹೇಡಿತನವನ್ನು ಬಿಡು. ಶತ್ರುಪಕ್ಷದವರು ಬೆನ್ನು ತಟ್ಟಿದ ಮಾತ್ರಕ್ಕೇ ಇಂತಹ ಹೀನಕಾರ್ಯವನ್ನು ಮಾಡಬೇಕೆ ?

**ವಿಭೀಷಣ.**—ಇದು ಹೀನಕಾರ್ಯವಲ್ಲ....ಸ್ವಾಮಿಯ ಸೇವೆ.

**ಮಂಡೋದರಿ.**—(ಕೋಪದಿಂದ) ನಿನ್ನ ಸ್ವಾಮಿ ಸೇವೆಯನ್ನು ಸುಡು. ಶತ್ರುಪಕ್ಷವನ್ನು ಸೇರಿದರೂ ಚಿಂತೆಯಿಲ್ಲ. ನಿರ್ವಂಚನೆಯಿಂದ ವೀರನಂತೆ ರಾವಣೇಶ್ವರನ ಮೇಲೆ ಯುದ್ಧಮಾಡು. ಶ್ರೀರಾಮನು ಧೀರೋದಾತ್ತನಾದ ವೀರಪುರುಷ. ನನ್ನ ಪ್ರಾಣಸಖಿಯಾದ ಸೀತಾದೇವಿಯ ಮಾತುಗಳಿಂದಲೂ ಅವನ ಸ್ವಭಾವವನ್ನು ನಾನು ಗ್ರಹಿಸಿದ್ದೇನೆ. ನೀವೆಂದಿಗೂ ಅವನ ಅಪ್ಪಣೆಯನ್ನು ಪಡೆದು ಬಂದಿರಲಾರಿರಿ. ಈ ಹೇಯ ಕೃತ್ಯವನ್ನು ಅವನೆಂದಿಗೂ ಮನ್ನಿಸನು. ತುಚ್ಛತನವು ಸಾಕು. ತೊಲಗು, ವಿಭೀಷಣ, ತೊಲಗು. ಇನ್ನು ಮುಂದಾದರೂ ವಿವೇಕದಿಂದ ವರ್ತಿಸು.

**ವಿಭೀಷಣ.**—ಕೃತಕಾರ್ಯರಾದಲ್ಲದೆ ನಾವೆಂದಿಗೂ ಹಿಂದಕ್ಕೆ ಹೋಗೆವು. ಬನ್ನಿರಿ, ಕಪಿವೀರರೆ, ಬನ್ನಿರಿ.

**ಮಂಡೋದರಿ.**—(ಮುಂದಕ್ಕೆ ಹೆಜ್ಜೆಯಿಟ್ಟವರೆಲ್ಲರನ್ನೂ ಅಡ್ಡಕಟ್ಟಿ) ಹೋಗುವುದಾದರೆ, ಕಾಳಗವನ್ನು ಕೊಟ್ಟು ಮುಂದೆ ಹೆಜ್ಜೆಯಿಡಿ.

ಈ ದೇಹದಲ್ಲಿ ರಕ್ತದ ಬಿಂದುವು ಇರುವವರೆಗೂ ಪಾಪಕೃತ್ಯಕ್ಕೆ ಅವಕಾಶ ಕೊಡೆನು. ಬನ್ನಿರಿ! ಪಾಮರರಿರಾ, ಬನ್ನಿರಿ! (ಚಕ್ರಾಯುಧವು ಜಾಜ್ವಲ್ಯಮಾನವಾಗಿ ಪ್ರಜ್ವಲಿಸುತ್ತ ಅವಳ ಹಿಂದೆ ನಿಲ್ಲುವುದು) ಯಾರು ಬರುವಿರೋ ಬನ್ನಿ! (ಖಡ್ಗವನ್ನು ಝಳಪಿಸುತ್ತ) ಶಾಕಿನಿಗೆ ಬಲಿ, ಬನ್ನಿ!

**ಅಂಗದ.**—ಈಕೆಯು ನಾರಿಯಲ್ಲ. ಆದಿಶಕ್ತಿಯ ಅವತಾರ.

**ವಿಭೀಷಣ.**—ರಾಮಚಂದ್ರನಿಗೆ ತಿಳಿಸದೆ ಬಂದಿದ್ದೇವೆ. ಅನರ್ಥವು ಸಂಭವಿಸೀತು. ಆತನ ಆಗ್ರಹಕ್ಕೆ ಪಾತ್ರರಾದೇವು. ಹೋಗೋಣ ನಡೆಯಿರಿ.

(ವಿಭೀಷಣನೂ, ಕಪಿವೀರರೂ ಓಡುತ್ತ ಹೊರಟುಹೋಗುವರು.)

(ಧ್ಯಾನವಳಿದು ಧೃತಿಗೆಟ್ಟ ರಾವಣನು ಪ್ರವೇಶಿಸುವನು. ಮಂಡೋದರಿಯು ವೀರಾವೇಶದಿಂದ ನಿಂತಿರುವಳು. ಅವಳ ಹಿಂದೆ ಚಕ್ರಾಯುಧವು ಪ್ರಜ್ವಲಿಸುತ್ತ ತಿರುಗುತ್ತಿರುವುದು.)

**ರಾವಣ.**—ಆದಿಶಕ್ತಿ! ಒಲಿದು ಬಂದೆಯಾ ಲೋಕಮಾತೆ?

(ನಮಸ್ಕರಿಸತೊಡಗುವನು.)

**ಮಂಡೋದರಿ.**—(ಖಡ್ಗವನ್ನು ಕೆಳಗೆ ಹಾಕಿ, ರಾವಣನನ್ನು ಹಿಡಿದೆತ್ತಿ ಕಂಬನಿಯನ್ನು ಸುರಿಸುತ್ತ ಗದ್ಗದ ಧ್ವನಿಯಲ್ಲಿ) ನಾಥ! ಕ್ರೂರ ವಿಧಿಯು ನಮಗೆ ವಿರೋಧವಾಗಿದೆ. ಆದುದರಿಂದಲೇ, ಸಂಯಮಿಶ್ರೇಷ್ಠನಾದ ನಿನ್ನ ಚಿತ್ತನಿರೋಧವೂ ದೆಸೆಗೆಟ್ಟು, ನೀನು ಈಗಲೇ ಬಹಿರ್ಮುಖನಾದೆ. ನಮ್ಮ ವಿಪತ್ತು ನಿವಾರಣೆಯಾಗಲು, ಇರುವುದು ಒಂದೇ ದಾರಿ. ಅದು ನಿನಗೆ ಸಮ್ಮತವಿಲ್ಲ. ಪ್ರಭುವೆ, ಪ್ರಭುವೆ, ಅಯ್ಯೋ ನಾನೇಕೆ ಹುಟ್ಟಿದೆ! (ಮಂಡೋದರಿಯು ಮೂರ್ಛಿತಳಾಗಿ ಕೆಳಗೆ ಬೀಳುವಷ್ಟರಲ್ಲಿ ರಾವಣನು ಅವಳನ್ನು ಹಿಡಿದುಕೊಂಡು, ತಾನು ಕೆಳಗೆ ಕುಳಿತುಕೊಂಡು, ತನ್ನ ತೊಡೆಯಮೇಲೆ ಅವಳ ತಲೆಯನ್ನಿಟ್ಟುಕೊಳ್ಳುವನು.)

**ರಾವಣ.**—(ತಾನು ಹೊದೆದಿರುವ ಪೀತಾಂಬರದ ಸೆರಗಿನಿಂದ ಗಾಳಿಯನ್ನು ಬೀಸುತ್ತ) ನಾನು ಸುಪ್ರೀತನಾಗಿ ಸಂತಸಪಡುವ ಉಡುಪು; ನಾನಿತ್ತ ಮಣಿಖಚಿತವಾದ ಮೆಚ್ಚಿನ ಮುಡಿಕಟ್ಟು. ಅಪರಾಧಿಯನ್ನೂ ಪ್ರೀತಿಸುವ ನನ್ನ ಸುವರ್ಣ ಪುತ್ಥಳಿಯೆ! ಮನೋಹರವಾದ ನನ್ನ ಶಿಂಗರದ ಹೂವೆ! ನಿನ್ನಂತಹವಳಲ್ಲಿ ದ್ರೋಹಿಯಾದೆನೇ ನಾನು! (ಗದ್ಗದ ಧ್ವನಿಯಿಂದ) ಮಂಡೋದರಿ, ಮಂಡೋದರಿ, ಮಂಡೋದರಿ!

(ತೆರೆಯು ಬೀಳುವುದು.)

---

## ದೃಶ್ಯ ೭

[ರಾವಣನ ಅರಮನೆಯಲ್ಲಿ ಶಸ್ತ್ರಾಗಾರಕ್ಕೆ ಹೋಗುವ ಮಾರ್ಗ.
ಸಮಯ: ಮಧ್ಯಾಹ್ನದ ಮೇಲೆ.]

**ಮಂಡೋದರಿ.**—(ಪ್ರವೇಶಿಸಿ) ಸೀತಾದೇವಿಯನ್ನು ರಾಮ ಚಂದ್ರನಿಗೊಪ್ಪಿಸಬೇಕೆಂಬ ನನ್ನ ಪ್ರಾರ್ಥನೆಯನ್ನು ಕುರಿತು ಯೋಚಿಸು ವುದಾಗಿ ಆರ್ಯಪುತ್ರನು ಹೇಳಿದ್ದನು. ಆದರೆ ಸನ್ನಾಹ ಭೇರಿಯು ಮೊಳಗಿತು. ಆರ್ಯಪುತ್ರನು ಯುದ್ಧಭೂಮಿಗೆ ತೆರಳುವಂತೆ ತೋರುತ್ತದೆ.

**ರಾವಣ.**—(ಶಸ್ತ್ರಾಸ್ತ್ರಗಳನ್ನು ಧರಿಸಿ ಯುದ್ಧ ಸನ್ನದ್ಧನಾಗಿ ಪ್ರವೇಶಿಸಿ ಮಂಡೋದರಿಯು ತನಗೆ ನಮಸ್ಕರಿಸಿದ ಮೇಲೆ) ಏಳು, ರಮಣಿ, ಮೇಲಕ್ಕೇಳು. (ಮೇಲಕ್ಕೆತ್ತುವನು.)

**ಮಂಡೋದರಿ.**—ಬಹುಕಾಲಕ್ಕೆ ಹಿಂದೆ ಕೇಳಿದ್ದ ಪ್ರಿಯ ವಚನ! ............ಆರ್ಯಪುತ್ರ! ಇದೇಕೆ ಧ್ವನಿಯು ಭಾರವಾಗಿದೆ? (ಮುಖವನ್ನು ದೃಷ್ಟಿಸಿ ನೋಡಿ) ಪ್ರಾಣನಾಥ! ನೀನು ಬಹುವಾಗಿ ರೋದಿಸಿರಬೇಕು. ಕಾರಣವನ್ನು ತಿಳಿಯಬಹುದೆ?

**ರಾವಣ.**—(ನಿಟ್ಟುಸಿರುಬಿಟ್ಟು)........ಹಳೆಯ ನೆನಪು. ಬಾಲ್ಯದಲ್ಲಿ ಇಂದ್ರಜಿತುವು ನನ್ನ ಗದೆಯನ್ನು ಎತ್ತಲು ಪ್ರಯತ್ನಿಸಿ ಮುಕ್ಕಿರಿಯುತ್ತಿದ್ದುದು, ಸ್ವಲ್ಪ ದಿನಗಳಲ್ಲೇ ಅದನ್ನು ಎತ್ತುವಷ್ಟು ಸಾಮರ್ಥ್ಯವುಂಟಾಗುವುದೆಂದು ತನಗೆ ತಾನೇ ಸಮಾಧಾನ ಹೇಳಿಕೊಳ್ಳುತ್ತಿದ್ದುದು, ಒಂದು ದಿನ ಅವನು ನನ್ನನ್ನು ಕುರಿತು, "ತಂದೆಯೆ, ನನಗೆ ಶೂರರೊಬ್ಬರನ್ನೂ ಬಿಡದೆ ನೀನೇ ಎಲ್ಲರನ್ನೂ ಜಯಿಸಿಬಿಡಬೇಕೆಂದಿದ್ದೀಯೆ. ನಿನಗೆ ನನ್ನಲ್ಲಿ ಅಮ್ಮನಷ್ಟು ಪ್ರೀತಿಯಿಲ್ಲ" ಎಂದು ಹೇಳಿದುದು, ಅಕ್ಷಕುಮಾರನು ಬಾಲಕನಾಗಿದ್ದಾಗ ತನ್ನ ಆಟದ ಬಿಲ್ಲನ್ನು ತೋರಿಸಿ, "ನಿಂಗೆ ದೊಡ್ಡ ಬಿಲ್ಲು. ಅಣ್ಣ ಇಂದ್ರಜಿತೂಗೆ ದೊಡ್ಡ ಬಿಲ್ಲು. ನಂಗೆ ಮಾತ್ರ ಪುಟ್ಟ ಬಿಲ್ಲು. ಅಮ್ಮಂಗೆ ಹೇಳಿ, ಎರಡು ಬಿಲ್ಲೂ ನಾನೇ ತೊಗೋತೀನಿ" ಎಂದು ಮುಂತಾಗಿ ಹೇಳುತ್ತಿದ್ದುದು, ಮೃತ್ಯು ಶಯ್ಯೆಯಲ್ಲಿ ಕುಂಭಕರ್ಣನು "ಅಣ್ಣ! ಯುದ್ಧರಂಗದಲ್ಲಿ ನೀನು ಒಬ್ಬಂಟಿಗನಾಗುವೆ. ನಿನ್ನನ್ನು ಬಿಟ್ಟು ಹೋಗಲಾರೆ" ಎಂದು ಹೇಳಿ ಕಂಬನಿದುಂಬಿದುದು—ಇದೆಲ್ಲಾ ನೆನಪಿಗೆ ಬಂದಿತು. ನನಗೋಸ್ಕರ ನಿರಪರಾಧಿಗಳಾದ ಇಬ್ಬರು ಮಕ್ಕಳೂ ಬಲಿಯಾದರು. ಅಯ್ಯೋ! ಬಲಭುಜದಂತಿದ್ದ ತಮ್ಮನೂ ನನಗೆ ಆಹುತಿಯಾದನು.

**ಮಂಡೋದರಿ.**—(ರಾವಣನನ್ನಪ್ಪಿ, ಅವನ ಭುಜದ ಮೇಲೆ ತಲೆಯನ್ನಿಟ್ಟು ರೋದಿಸಿ, ದುಃಖಾವೇಗವು ಕಡಮೆಯಾದಮೇಲೆ) ಆರ್ಯಪುತ್ರ! ಈಗೇಕೆ ಆ ಹಿಂದಿನ ಪ್ರಪಂಚದ ಸುದ್ದಿ?

**ರಾವಣ.**—ಸೀತಾರಾಮಚಂದ್ರರ ಸುಮ್ಮಾನದ ಸುಗ್ಗಿಯನ್ನು ತಪ್ಪಿಸಿದುದಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು. ಪುತ್ರ ದುಃಖವನ್ನು ಕಾಣದವರು ಎಂತಹ ಪುಣ್ಯಾತ್ಮರೋ! ದೇವಿ! ನಿನ್ನ ವಿಷಯದಲ್ಲಂತೂ ............... (ಗದ್ಗದ ಧ್ವನಿಯಿಂದ ಸುಮ್ಮನಾಗುವನು.)

**ಮಂಡೋದರಿ.**—(ರಾವಣನನ್ನು ಮತ್ತಷ್ಟು ಬಿಗಿದಪ್ಪಿ) ನನ್ನ ವಿಷಯದಲ್ಲಿ....ಏನೂ ಇಲ್ಲ. ನಾನೇ ಎಷ್ಟೋಸಾರಿ ದುಡುಕಿ ನುಡಿದಿದ್ದೇನೆ. ಪ್ರಾಣೇಶ್ವರ! ಏನೂ ಹೇಳಬೇಡ. ಬೇಡ,...........ಸುಮ್ಮನಿರು.

**ರಾವಣ.**—ಹೇಗೆತಾನೇ ಸುಮ್ಮನಿರಲಿ? ನಿನ್ನ ವಿಷಯದಲ್ಲಿ ನಾನು ಉಚಿತ ರೀತಿಯಲ್ಲಿ ವರ್ತಿಸಲಿಲ್ಲ. ನೀನು ನನ್ನನ್ನು ಪ್ರೀತಿಸುತ್ತಿರುವಂತೆ, ನಾನು ನಿನ್ನನ್ನು ಪ್ರೀತಿಸಲಿಲ್ಲ. ಹಾಗೆ ಮಾತ್ರ ಮಾಡಿದ್ದರೆ, ನಾನು ನಿರಾತಂಕವಾಗಿ ಯುದ್ಧಭೂಮಿಗೆ ಹೋಗುತ್ತಿದ್ದೆ. ಪುಣ್ಯವಂತರಿಗೆ ಮರಣವಾದರೂ ಸುಖಕರವಾಗಿರುತ್ತದೆ. ಪಾಪಿಷ್ಠರಿಗೆ ಸಾವಿನಲ್ಲಿಯೂ ಸುಖವಿಲ್ಲ. ಅಯ್ಯೋ!

**ಮಂಡೋದರಿ.**—ಪ್ರಾಣನಾಥ! ಸೈರಿಸು, ಸೈರಿಸು. ನಿನ್ನಿಂದ ನಾನು ಎಷ್ಟು ಸುಖಿಯಾಗಿದ್ದೆನೆಂಬುದನ್ನು ನನ್ನ ಹೃದಯವೇ ಬಲ್ಲುದು. ನನ್ನ ಜೀವಿತದ ಅವಲಂಬನವೇ ನೀನಾಗಿರುವೆ. ಜೀವನದಲ್ಲಿ ಒದಗುವ ಸುಖ ದುಃಖಗಳೆರಡನ್ನೂ ಪರಿಗಣಿಸಬೇಕಲ್ಲವೆ? ದುಃಖವೊಂದನ್ನೇ ಗಮನಿಸುವುದು ನ್ಯಾಯವೆ? ಮಹೋನ್ನತವಾಗಿ ಬಾಳಿದವನು, ಮತ್ತೆ ಮಹೋನ್ನತನಾಗಿ ಬಾಳಲು ಅವಕಾಶವಿರುವವನು ಪಾಪಿಯೆಂದು ಹಳಿದುಕೊಳ್ಳಲೇಕೆ?

**ರಾವಣ.**—(ಮಂಡೋದರಿಯನ್ನಾಲಿಂಗಿಸಿ) ನೀನು ನನ್ನ ಜೀವರತ್ನ.

**ಮಂಡೋದರಿ.**—ಆರ್ಯಪುತ್ರ! ನನ್ನ ಪ್ರಾರ್ಥನೆಯ ವಿಷಯವೇನಾಯಿತು?

**ರಾವಣ.**—ಸ್ವಲ್ಪ ತಡೆ.......(ಸ್ವಲ್ಪ ಸ್ಥಿರನಾಗಿ ವೀರಭಾವದಿಂದ) ನನ್ನ ಪ್ರಿಯಪುತ್ರರನ್ನು ಕೊಂದವರನ್ನು ತೀರಿಸಿದಮೇಲೆ ಮಾತ್ರವೇ ಆ ವಿಚಾರ. ಪ್ರೇಯಸಿ! ಆತ್ಮಸಮರದಲ್ಲಿ ಜಯಶಾಲಿಯಾಗಲು

ನನಗೂ ಆಸೆಯುಂಟು. ರಾಜನಿಗೆ ತನ್ನ ರಾಜ್ಯದಲ್ಲಿರುವವರೆಲ್ಲರೂ ಮಕ್ಕಳ ಸಮಾನ. ಆದಕಾರಣ, ಸೀತೆಯೂ ನನ್ನ ಪ್ರಜೆಯೆಂದು ಭಾವಿಸಿ, ನನ್ನ ಮೇಲಣ ಕಳಂಕವನ್ನು ತೊಡೆದುಹಾಕಬೇಕೆಂಬ ಪ್ರಯತ್ನದಲ್ಲಿ ಹೆಣಗಿ ಕ್ಷತವಿಕ್ಷತನಾಗುತ್ತಿರುವುದನ್ನೂ ನೀನೇ ಬಲ್ಲೆ. ಒಂದುವೇಳೆ ಸೀತೆಯನ್ನೊಪ್ಪಿಸಬೇಕಾದರೂ ಅದಕ್ಕೆ ತಕ್ಕ ವೈಭವದಿಂದ ಒಪ್ಪಿಸುವೆನು. ದಂಪತಿಗಳೀರ್ವರಿಗೂ ದಿವ್ಯ ವಸ್ತ್ರಾಭರಣಗಳ ಮೆಚ್ಚನ್ನು ಸಿದ್ಧಪಡಿಸಿಟ್ಟುಕೊಳ್ಳುವಂತೆ ಕೂಡ, ಮಹೋದರನಿಗೆ ಆಜ್ಞಾಪಿಸಿದ್ದೇನೆ.

**ಮಂಡೋದರಿ.**—ವೀರಾಗ್ರೇಸರನಾದ ರಾಮಚಂದ್ರನಿಗೆ ಸೀತಾದೇವಿಯನ್ನೊಪ್ಪಿಸಬೇಕೆಂದಿರುವ ಬಗೆಯನ್ನು ಕೇಳಿ ನನ್ನ ಮನಸ್ಸಿಗೆ ಹರ್ಷವಾಯಿತು.

**ರಾವಣ.**—(ಶೌರ್ಯದ ಆವೇಶದ ಬಲ್ಮೆಯಿಂದ) ದೇವಿ! ಏನೆಂದು ಹೇಳಿದೆ? ವೀರಾಗ್ರೇಸರ, ವೀರಾಗ್ರೇಸರ! ಈ ಜಗತ್ತಿನಲ್ಲಿ ವೀರಾಗ್ರೇಸರನೆಂಬ ಹೆಸರು ಒಬ್ಬನಿಗೇ ಸಲ್ಲಬೇಕು. ರಾವಣನೊಬ್ಬನಿಗೇ ಆ ಹೆಸರು. ರಾಮನನ್ನು ಸೆರೆಹಿಡಿದು ತಂದು ಆ ಬಳಿಕ ಸೀತೆಯನ್ನೊಪ್ಪಿಸಿ ಅವನನ್ನು ಬೀಳ್ಕೊಳ್ಳುವೆನು. ಇಲ್ಲವೇ ಈ ತನುವನ್ನು ಈಡಾಡಿ, ವೀರನಿಗೆ ಉಚಿತವಾದ ವೀರ ಮರಣವನ್ನು ಪಡೆಯುವೆನು. ಎಲವೋ ಮದಾಂಧರಾದ ಬಣಗುಗಳಿರಾ! ನನ್ನ ಇಂದ್ರಜಿತುವನ್ನು—ನನ್ನ ಮುದ್ದಿನ ಸಿಂಹಕಿಶೋರವನ್ನು—ಕೊಂದಿರುವ, ಅವನ ಸಾವನ್ನು ನೋಡಿರುವ, ಅವನ ಸಾವಿಗೆ ಕಾರಣರಾಗಿರುವ ನಿಮ್ಮೆಲ್ಲರನ್ನೂ ವಧಿಸಿದಲ್ಲದೆ ನನಗೆ ತೃಪ್ತಿಯಿಲ್ಲ. ನೀವು ಎಲ್ಲಿಗೆ ಹೋದರೂ ಬಿಡೆನು. ಮೇದಿನಿಯಲ್ಲಿರಲಿ, ಸ್ವರ್ಗದಲ್ಲಿರಲಿ, ಅಜನ ಗುಂಡಿಗೆಯಲ್ಲಿರಲಿ, ಪ್ರಾಣಭಯದಿಂದ ನೀವು ಮಂದರೋದ್ಧರನ ಮರೆಹೊಕ್ಕಿರಲಿ, ಕೊನೆಗೆ

ಫಾಲನೇತ್ರನಿಗೆ ಶರಣಾಗತರಾಗಿರಲಿ, ನೀವು ಎಲ್ಲಿ ಹೋಗಿದ್ದರೂ, ನಿಮ್ಮನ್ನು ರಣರಂಗಕ್ಕೆ ಸೆಳೆದು ತಂದು ದಿಗ್ಬಲಿ ಹೊಡೆದು ರಣಭೂಮಿಗೆ ಕಾಣಿಕೆಯನ್ನೊಪ್ಪಿಸುವೆನು.

(ಹೊರಟುಹೋಗುವನು.)

**ಮಂಡೋದರಿ.**—(ರಾವಣನು ಹೋದಕಡೆಗೇ ದೃಷ್ಟಿಸಿ ನೋಡುತ್ತಿದ್ದು) ಕೊಂದು, ಕೊಲಿಸಿಕೊಳ್ಳಲು, ತೆರಳಿದೆಯಾ ನಾಥ? ಆರ್ಯಪುತ್ರನು ಮಾನಧನನೆಂಬುದನ್ನು ಮರೆತು ಮಾತನಾಡಿದೆ. ದುಡುಕಿ ನುಡಿದೆ. ನನ್ನ ಎರಡು ಜೀವರತ್ನಗಳು ಪುಡಿಯಾದುವು. ಆರ್ಯಪುತ್ರನೂ ಏನಾಗುವನೋ! (ಸ್ವಲ್ಪ ಚಿಂತಿಸಿ) ಕೊನೆಗೆ ಸಾವೇ ನನಗೆ ಶರಣೆಂದು ತೋರುತ್ತದೆ. ನನ್ನ ಜೀವಾತ್ಮವು ಪಂಜರದಲ್ಲಿಟ್ಟ ಪಕ್ಷಿಯಂತಾಗಿದೆ. ಬಂದುದೆಲ್ಲಿಂದಲೋ, ಮುಂದೆಲ್ಲಿಗೆ ಪ್ರಯಾಣವೋ, ಒಂದೂ ತಿಳಿಯದು. ಸದ್ಯದಲ್ಲೀನೋ ಅದು ಪಂಜರಬದ್ಧವಾಗಿ ಪಾಡುಪಡುತ್ತಿದೆ. ಸರ್ವಮಂಗಳೆ! ಸಮಸ್ತವೂ ನಿನ್ನ ಸೇವೆಯೆಂದು ಭಾವಿಸಿದವರಿಗೆ ಇದೇ ಗತಿಯೆ? ಐಹಿಕ ಜೀವನದಲ್ಲಿ ಇದಕ್ಕಿಂತ ಉತ್ತಮವಾದ ಮತ್ತಾವ ಪರಿಣಾಮವೂ ಇಲ್ಲವೆ? ಅಥವಾ ನಮ್ಮ ಪರಿಮಿತ ಭಾವನೆಗಳ ಮುರುಕು ತಕ್ಕಡಿಯಲ್ಲಿ ನಿನ್ನ ನ್ಯಾಯವನ್ನು ತೂಗುವುದು ತರವೆ? ನಿನ್ನ ಮಾಯಾಜಾಲವನ್ನು ಭೇದಿಸಲು ನನಗೆಲ್ಲಿಯ ಅಧಿಕಾರ? ಸೇವೆಗೆ ಬಂದವಳು ಸೇವಕಿಯಂತಿರಬೇಕು. ದೇವಿ! ನಿನ್ನ ದಿವ್ಯ ಚಿತ್ತಕ್ಕೆ ತೋರಿದುದೇ ನನಗೆ ಮಹಾಪ್ರಸಾದ. ಕರ್ತವ್ಯವನ್ನು ನೇರವೇರಿಸುವುದೊಂದೇ ನನ್ನ ಮೇಲಣ ಭಾರ.

(ಅಂತರಿಕ್ಷದ ಕಡೆಗೆ ಕೈಮುಗಿದು ದೇವಿಯ ಸ್ತೋತ್ರವನ್ನು ಹಾಡಿ, ಧ್ಯಾನಮಗ್ನಳಾಗುವಳು. ತೆರೆಯು ನಿಧಾನವಾಗಿ ಬೀಳುವುದು.)

---

# ಮೂರನೆಯ ಅಂಕ

## ದೃಶ್ಯ ೧

[ಅಶೋಕವನದ ಭದ್ರಕಾಳಿಯ ದೇವಾಲಯ. ಸೀತಾದೇವಿಯೂ, ಮಂಡೋದರಿಯೂ ಒಬ್ಬರೆದುರಿಗೆ ಮತ್ತೊಬ್ಬರು ಕುಳಿತು ಭದ್ರಕಾಳಿಯನ್ನು ಪೂಜಿಸುತ್ತಿರುವರು. ಭದ್ರಕಾಳಿಯ ಪಾದದ ಮೇಲೆ ಹೂಗಳ ಒಂದು ರಾಶಿಯೇ ಇರುವುದು. ಸಮಯ: ಬೆಳಗಿನ ಜಾಮದ ವೇಳೆ.]

**ಮಂಡೋದರಿ.**—ನಾವೀರ್ವರೂ ಎಷ್ಟು ಹೊತ್ತು ಪೂಜೆಮಾಡಿ ಎಷ್ಟುಕಾಲ ಧ್ಯಾನಮಗ್ನರಾಗಿದ್ದೆವೆಂಬುದರ ಅ ರಿ ವೇ ನನಗಿಲ್ಲ. ಕೊನೆಯದಾದ ಪುಷ್ಪಾಂಜಲಿಯನ್ನೊಪ್ಪಿಸಬೇಕಾದ ಸಮಯವೇಕೆ ಬಂದಿತೋ ಎನ್ನಿಸುತ್ತದೆ. ಅದರಲ್ಲೂ ಈ ದಿನವಂತೂ ಹೇಳಬೇಕಾದುದೇ ಇಲ್ಲ.

**ಸೀತಾದೇವಿ.**—ದೇವಿಯ ಪೂಜೆಯಲ್ಲಿ ನಿನಗೆಷ್ಟು ಆದರ? ಎಷ್ಟು ಭಕ್ತಿ?

**ಮಂಡೋದರಿ.**—ಹೌದು ತಂಗಿ, ಆ ವಿಷಯದಲ್ಲ ನಾವಿಬ್ಬರೂ ಸಮಾನರು. ಆದರೂ........ ಈ ದಿನ........ಹೋ ೯ ಗ ಲಿ........ಆ ಮಾತು ಬೇಡ.

**ಸೀತಾದೇವಿ.**—ನನ್ನೊಡನೆ ಹೇಳಲು ಹಿಂತೆಗೆಯುವುದೇತಕ್ಕೆ? ನಾನು ಇಲ್ಲಿಗೆ ಬಂದಾಗಿನಿಂದಲೂ ನೋಡುತ್ತಿದ್ದೇನೆ. ನಿನ್ನ ಪ್ರೀತಿ ವಿಶ್ವಾಸಗಳಿಗೆ ಪರಿಮಿತಿಯೇ ಇಲ್ಲವಾಗಿದೆ. ನಾನು ತಾಯಿಯನ್ನು ಕಂಡುದಿಲ್ಲ. ಸಹೋದರಿಯನ್ನು ಪಡೆಯುವ ಭಾಗ್ಯದಿಂದಲೂ ನಾನು ದೂರಳು. ಲಂಕೆಗೆ ಬಂದಾಗಿನಿಂದ ಇವೆರಡೂ ನೀನೇ ಆಗಿರುವೆ. ಹೀಗಿದ್ದೂ ನನ್ನೊಡನೆ ಅದನ್ನು ಹೇಳಕೂಡದೆ?

**ಮಂಡೋದರಿ.**—ಹೆಚ್ಚೇನೂ ಇಲ್ಲ. ನಾಳೆಯೇ ಯುದ್ಧದ ಕೊನೆಯ ದಿನ. ಇಹಲೋಕದಲ್ಲಿ ಭದ್ರಕಾಳಿಗೆ ಇದೇ ನನ್ನ ಕೊನೆಯ ಸೇವೆಯೋ ಏನೋ—ಎಂಬ ಸಂದೇಹ. ಅದರಿಂದ ಹಾಗೆ ತೋರಿತು. ಆದುದರಿಂದಲೇ, ಎಷ್ಟು ಪೂಜಿಸಿದರೂ ತೃಪ್ತಿಯಿಲ್ಲ. ನೊಂದ ಮನಸ್ಸು. ಬೆಂದ ಕರಳು. ಬಳಲಿದ ಜೀವ. ನನ್ನ ಸ್ಥಿತಿಯಲ್ಲಿ, ದೇವಿಯ ಪೂಜೆ, ಆರ್ಯಪುತ್ರನ ಸೇವೆ, ಪ್ರಜೆಗಳ ಆರಾಧನೆ—ಈ ಮೂರು ಕೆಲಸ ಗಳಿಂದಲೇ ನನ್ನ ಹೃದಯಕ್ಕೆ ಅಮೃತ ಸೇಚನ.

**ಸೀತಾದೇವಿ.**—ಅಕ್ಕ! ನಮ್ಮ ತಂದೆಯಾದ ಜನಕಮಹಾ ರಾಜನು ಕರ್ಮಯೋಗಿಯಾದ ರಾಜರ್ಷಿಯೆಂದು ಪ್ರಖ್ಯಾತನಾಗಿದ್ದಾನೆ. ನೀನು ಅವನನ್ನೂ ಮೀರಿಸಿರುವೆ. ಏಕೆಂದರೆ, ನೀನು ದುಃಖದ ನಿಕಷ ಪರೀಕ್ಷೆಗೂ ಸಿದ್ಧಳಾದ ಕರ್ಮಯೋಗಿನಿ.

**ಮಂಡೋದರಿ.**—ನಿನ್ನ ಹೃದಯವು ಅದೆಷ್ಟು ಸರಳವೋ!.... ತಂಗಿ, ಸುಖ ದುಃಖಗಳೆರಡನ್ನೂ ಅನುಭವಿಸಲೇ ಬೇಕಲ್ಲವೆ? ಅದರಲ್ಲಿ ವಿಶೇಷವೇನಿದೆ?

**ಸೀತಾದೇವಿ.**—ಘೋರ ಯಾತನೆಯನ್ನೂ ಅನುಭವಿಸುತ್ತ, ಹೀಗೆ ಸಮತೆಯಿಂದಿರುವುದು ಸಾಮಾನ್ಯರಿಗೆ ಸಾಧ್ಯವೆ?

**ಮಂಡೋದರಿ.**—ಅಯ್ಯೋ! ನನ್ನಲ್ಲಿ ಸಮತೆಯೆಲ್ಲಿದೆ? ಚಂಡ ಮಾರುತವೆದ್ದ ನಿಶೀಥಸಮಯದಲ್ಲಿ ತನ್ನ ಕ್ಷೋಭೆಯನ್ನು ತಾನೇ ಸಹಿಸ ಲಾರದೆ ಆರ್ತಸ್ವರದಿಂದ ಮೊರೆಯುವ ಸಮುದ್ರದಂತೆ, ಒಂದೊಂದು ವೇಳೆ ನನ್ನ ಹೃದಯವು ಚೀರಿಡುವುದು. ಹಾಗೆ ಚೀರಿಡುತ್ತ, ಚೀರಿಡುತ್ತ, ಸರ್ವಮಂಗಳೆಯು ನಿಜವಾಗಿಯೂ ಕರುಣೆಯುಳ್ಳವಳೇ, ಹಾಗಿದ್ದರೆ ಧರ್ಮ ಪರಾಯಣತೆಗೆ ಪ್ರತಿಫಲವಾಗಿ ಅವಳು ದುಃಖದ ಭಿಕ್ಷವನ್ನೇಕೆ ನೀಡುವಳು—ಎಂದು ನನ್ನ ಹೃದಯವು ಪ್ರಶ್ನೆಮಾಡುತ್ತದೆ.

ಉತ್ತರ ಕ್ಷಣದಲ್ಲಿಯೇ ಸೇವೆಗೆ ಬಂದಿರುವವಳು ಸೇವೆಮಾಡಲು ಮಾತ್ರವೇ ಅಧಿಕಾರಿಣಿಯೆಂದೂ, ದೇಹ ಪಂಜರದಿಂದ ತಪ್ಪಿಸಿಕೊಂಡು ಹೋದ ಬಳಿಕ ಪರಲೋಕದ ಪ್ರಾಜ್ಞರೆಲ್ಲರನ್ನೂ ಹೃದಯಭೇದಕವಾದ ಇದೇ ಪ್ರಶ್ನೆಗಳನ್ನು ಕೇಳಬೇಕೆಂದೂ ಬುದ್ಧಿಯು ವಿವೇಕ ಹೇಳುತ್ತದೆ. ಆರ್ಯಪುತ್ರನು ಒಟ್ಟು ಸೃಷ್ಟಿಗೇ ಶಿಂಗರದ ಹೂವಾಗಿ ಜಗತ್ತಿಗೇ ಪರಿಮಳವನ್ನು ಬೀರುವಷ್ಟರಲ್ಲಿಯೇ-ಮರ್ತ್ಯಲೋಕಕ್ಕೆ ಮಂಗಳವನ್ನುಂಟು ಮಾಡುವ ಮುಂಬೆಳಗನ್ನು ನೋಡಿ ಆನಂದಿಸುವಷ್ಟರಲ್ಲಿಯೇ-ವಿಘಾತವುಂಟಾಯಿತು. ಹೀಗಿದ್ದೂ ಭಗವಂತನೊಬ್ಬನಿದ್ದಾನೆಯೇ-ಎಂದು ನನ್ನ ಮನಸ್ಸಿಗೆ ಅನೇಕವೇಳೆ ಕಳವಳವಾಗುತ್ತದೆ. ಆದರೆ, ನನ್ನ ಹುಚ್ಚು ಭಾವನೆಗೆ ನಾನೇ ನಕ್ಕು, ಸೃಷ್ಟಿಯೇ ಅದಕ್ಕೆ ಸಾಕಾದಷ್ಟು ಸದುತ್ತರವೆಂದುಕೊಂಡು ಭಕ್ತಿಯ ಕೋಟೆಯನ್ನು ಮತ್ತಷ್ಟು ಭದ್ರಪಡಿಸುತ್ತೇನೆ. ಹೀಗಿದ್ದೂ ನಾನು ಸಾಮಾನ್ಯಳಲ್ಲವಂತೆ. ಇಂತಹ ಚಂಚಲ ಚಿತ್ತಳೂ, ಬುದ್ಧಿಶೂನ್ಯಳೂ ಸಾಮಾನ್ಯಳಲ್ಲದೆ ಮತ್ತೇನು?

**ಸೀತಾದೇವಿ.**—ಅಕ್ಕ! ಜೀವರತ್ನಕ್ಕೆ ತನ್ನ ಬೆಲೆಯು ತಿಳಿದಿರುವುದೆನ್ನುವೆಯಾ? ಹಾಗೆ ತಿಳಿದಿದ್ದರೆ ಅದು ಜೀವರತ್ನವೆನ್ನಿಸಿಕೊಳ್ಳುತ್ತಿರಲಿಲ್ಲವೋ ಏನೋ! ಪುಷ್ಪಾಂಜಲಿಯನ್ನರ್ಪಿಸಿ, ಪೂಜೆಯನ್ನು ಪೂರೈಸೋಣ.

**ಮಂಡೋದರಿ.**—ಇಲ್ಲ. ಇಂದು ಪುಷ್ಪಾಂಜಲಿಯನ್ನರ್ಪಿಸಿ ದೇವಿಯನ್ನು ಪ್ರಾರ್ಥಿಸುವಂತಿಲ್ಲ. ನಾಳೆ, ಆರ್ಯಪುತ್ರನಿಗೂ, ಶ್ರೀರಾಮನಿಗೂ ಘೋರವಾದ ಯುದ್ಧ. ಭದ್ರಕಾಳಿಯಲ್ಲಿ ಯಾವ ಕಾಮ್ಯಾರ್ಥವನ್ನು ಬೇಡಲಿ? ಒಡಹುಟ್ಟಿದವಳಿಗಿಂತ ಹೆಚ್ಚಾಗಿರುವವಳಿಗೆ ಅಮಂಗಳವನ್ನು ಕೋರಲೆ? ಇಲ್ಲವೇ ನನಗೆ........ಅಯ್ಯೋ........ ಅದನ್ನು....ಅಬ್ಬ........ಭಯಾನಕ ಸ್ಥಿತಿ........ತಂಗಿ! ಆತ್ಮಾರ್ಪ

ಣವೇ ನಾನು ಭದ್ರಕಾಳಿಗೆ ಸಮರ್ಪಿಸುವ ಪುಷ್ಪಾಂಜಲಿ. ಅದಕ್ಕೆ ಅವಳು ಶಕ್ತಿಯನ್ನು ಕರುಣಿಸಲಿ!

(ದೇವಿಗೆ ಕೈಮುಗಿಯುವಳು.)

**ಸೀತಾದೇವಿ.**—ಅಕ್ಕ, ಅಕ್ಕ, ಮನಸ್ಸೇ ಎಲ್ಲಿಯೋ ತೇಲಿ ಹೋಗುತ್ತಿದೆ. ಈಗಿನಂತೆ ನಾನು ಇಲ್ಲಿಗೆ ಬಾರದೆ, ನಿನ್ನ ಪತಿಯೂ ನನ್ನ ಪತಿಯೂ ಮಿತ್ರರಾಗಿದ್ದ ಸುಯೋಗದ ಬೇರೆ ಸ್ಥಿತಿಯಲ್ಲಿ ಪತಿಯೊಡನೆ ಬಂದಿದ್ದರೆ! ನಾವಿಬ್ಬರೂ ಒಬ್ಬಳೇ ಮಾತೆಯ ಇಬ್ಬರು ಪುತ್ರಿಯರಂತೆ ನಿರಾತಂಕವಾಗಿರಬಹುದಾಗಿದ್ದಿತು. ಹತಭಾಗ್ಯೆಯಾದ ನನಗೆ ಆ ಭಾಗ್ಯವೆಲ್ಲಿ? ಅಕ್ಕ! ಭದ್ರಕಾಳಿಯ ಚಿತ್ತವನ್ನು ನಾವು ಬಲ್ಲೆವೆ? ಅವಳ ಚಿತ್ತವಿದ್ದಂತಾಗಲಿ!

(ತೆರೆಯು ನಿಧಾನವಾಗಿ ಬೀಳುವುದು. ಅರ್ಧ ನಿಮಿಷವಾದಮೇಲೆ ತೆರೆಯು ಪುನಃ ಮೇಲಕ್ಕೆ ಹೋಗುವುದು. ಆಗ್ಗೆ ಮಂಡೋದರಿಯೂ, ಸೀತೆಯೂ, ಇಬ್ಬರೂ ನಿಂತು, ಇಬ್ಬರೂ ಪುಷ್ಪಾಂಜಲಿಯನ್ನು ಹಿಡಿದು ಧ್ಯಾನ ಮಗ್ನರಾಗಿ ಭದ್ರಕಾಳಿಯನ್ನು ನೋಡುತ್ತಿರುವರು. ಪುನಃ ತೆರೆಯು ನಿಧಾನವಾಗಿ ಬೀಳವುದು.)

---

## ದೃಶ್ಯ ೨

[ಶ್ರೀರಾಮಚಂದ್ರನ ಶಿಬಿರದ ಮುಂಭಾಗ. ಜಾಂಬವ, ಸುಷೇಣ, ಸುಗ್ರೀವ, ಅಂಗದ, ನೀಲ ಮುಂತಾದವರೆಲ್ಲರೂ ಪ್ರವೇಶಿಸುವರು. ಸಮಯ: ಅಪರಾಹ್ನ.]

**ನೀಲ.**—ಎಷ್ಟು ಕಷ್ಟಪಟ್ಟು ಯುದ್ಧದಲ್ಲಿ ಜಯವನ್ನು ಸಂಪಾದಿಸಿದೆವು! ಇಂಥ ಸಂತೋಷವು ದೊರೆತಿದ್ದೂ ಸಡಗರಪಡುವುದಕ್ಕಿಲ್ಲ. ಆನಂದಪಟ್ಟು ಕೋಲಾಹಲಮಾಡುವುದಕ್ಕಿಲ್ಲ. ಶ್ರೀರಾಮಚಂದ್ರನು

ಹೀಗೇಕೆ ಆಜ್ಞೆ ಮಾಡಿದನೋ ಕಾಣೆ. ಸುಗ್ರೀವ! ~~ನೀನಾದರೂ~~ ಹೇಳ ಬಾರದಾಗಿದ್ದಿತೆ?

**ಸುಗ್ರೀವ.**—ನೀಲ! ನೀನಿನ್ನೂ ಚಿಕ್ಕವಯಸ್ಸಿನವನು. ಅಪಂಡಿತ. ಪ್ರಭು ರಾಮಚಂದ್ರನು ಪೂರ್ಣ ವಿವೇಕಿಯು. ಮಹಾನುಭಾವನು. ಇಂದಿನ ಸನ್ನಿವೇಶವನ್ನು ಸ್ಮರಿಸಿಕೊಂಡರೆ ಸಂತೋಷದಿಂದ ಸಡಗರಪಡಲು ಯಾರಿಗೆ ತಾನೆ ಮನಸ್ಸು ಬಂದೀತು? ಮಂಡೋದರೀ ರಾವಣರು ಮೃತ್ಯುವನ್ನು ಕಾಣುವ ದಿನವಲ್ಲವೇ ಇದು!

**ಜಾಂಬವ.**—ರಾಮಚಂದ್ರನು ಸಹೃದಯನು. ಲೀಲಾಮಾನುಷ ವಿಗ್ರಹವಾಗಿ ಭೂಮಿಗಿಳಿದುಬಂದಿರುವವನ ವಿಷಯದಲ್ಲಿ ಹೇಳಬೇಕಾದುದೇನು? ರಾವಣೇಶ್ವರನ ವಿಚಾರವಾಗಿ ಆತನು ಆಡಿದ ಮಾತುಗಳನ್ನು ಸ್ಮರಿಸಿಕೊಂಡರೆ, ಈಗ ಕೂಡ ರೋಮಾಂಚವಾಗುವುದು. "ಸೋಲುವವರೆಗೆ ಶತ್ರು. ಸೋತಮೇಲೆ ಸಜಾತಿ ಬಾಂಧವನು" ಎಂದು ಹೇಳುವುದು ಸಾಮಾನ್ಯರಿಂದ ಸಾಧ್ಯವೆ? ರಾವಣೇಶ್ವರನನ್ನು ಜೀವದಿಂದ ಉಳಿಸುವುದು ಅಸಾಧ್ಯವೆಂದು ತೋರುವವರೆಗೂ ಚಿಕಿತ್ಸೆ ಮಾಡಿಸಿ ಆದರವನ್ನು ತೋರಿಸುವುದೆಂದರೆ ಸಾಮಾನ್ಯವೆ?

**ನೀಲ.**—ಜಾಂಬವ! "ರಾವಣೇಶ್ವರ, ರಾವಣೇಶ್ವರ" ಎನ್ನುತ್ತಿರುವೆ. ಅವನೂ ಒಡೆಯನೆಂದು ಒಪ್ಪಿಕೊಂಡೆಯಾ? ಶತ್ರುವನ್ನು ಹೀಗೇಕೆ ಹೊಗಳುತ್ತಿರುವೆ?

**ಅಂಗದ.**—ಯೌವನದ ಉತ್ಸಾಹದೊಡನೆ ವೃದ್ಧಾಪ್ಯದ ವಿವೇಕವೂ ಸೇರಿದರೆ, ಆಗ ಅದರ ಒಳಮರ್ಮವು ನಿನಗೆ ಗೊತ್ತಾಗುವುದು.

**ಜಾಂಬವ.**—ನೀಲ! ಲೋಕಮಾತೆಯಾದ ಸೀತಾದೇವಿಯನ್ನು ಅಪಹರಿಸಿ ತಂದುದಕ್ಕಾಗಿ ರಾವಣೇಶ್ವರನು ನಿಂದ್ಯನೇನೋ ಆಹುದು.

ಆದರೂ ಶೌರ್ಯವೇ ಮುಂತಾದ ಸದ್ಗುಣಗಳಿಗಾಗಿ ಅವನನ್ನು ಶ್ಲಾಘಿಸಲೇಬೇಕು. ಶ್ರೀರಾಮಚಂದ್ರನು ಹೇಳಿದಂತೆ ರಾವಣೇಶ್ವರನೂ, ಅವನ ಕಡೆಯವರೂ ಶೂರಶ್ರೇಷ್ಠರಾದುದರಿಂದಲೇ ಈ ಯುದ್ಧದ ಮಹತ್ವವು ಹೆಚ್ಚಿದುದು.

**ನೀಲ.**—ನಾನೂ ಅದೆಲ್ಲವನ್ನೂ ಒಪ್ಪುವೆನು. ಆದರೆ, ಅಂಥ ಶೂರ ಶ್ರೇಷ್ಠರೆಲ್ಲರನ್ನೂ ಗೆದ್ದು ವಿಜಯಹೊಂದಿದ ಆನಂದದ ದಿನ. ಇಂದು ಉತ್ಸವವನ್ನು ನೆರವೇರಿಸಿ ಆನಂದಪಡುವುದಕ್ಕಿಲ್ಲವೆಂದು ನಮ್ಮ ಸೈನ್ಯದಲ್ಲಿ ಅನೇಕರಿಗೆ ಅಸಮಾಧಾನ.

**ಸುಗ್ರೀವ.**—ನೀನು ಈಗಲೇ ಹೋಗಿ ಅವರೆಲ್ಲರಿಗೂ ಹೇಳು. ಶ್ರೀರಾಮನ ಆಜ್ಞೆಯು ಶಿರೋಧಾರ್ಯವೆಂದು ತಿಳಿಸಿ ಸಮಾಧಾನ ಮಾಡಿ, ಬಾ.

**ಜಾಂಬವ.**—ನೀಲ! ಮತ್ತೊಂದು ವಿಷಯವನ್ನೂ ಯೋಚಿಸಿ ನೋಡು. ಶ್ರೀರಾಮಚಂದ್ರನೇ ಭಾಗಿಯಾಗದೆ ಅದೆಂತಹ ಆನಂದೋತ್ಸವ?

**ನೀಲ.**—ಪ್ರಭು ರಾಮಚಂದ್ರನು ಅದರಲ್ಲಿ ಭಾಗಿಯಾಗುವುದಿಲ್ಲವೆ?

**ಜಾಂಬವ.**—ಜಗತ್ತಿನ ಮಹಿಳೆಯರಿಗೇ ಅಲಂಕಾರಪ್ರಾಯರಾದ ಈರ್ವರು ಪೂಜ್ಯೆಯರಲ್ಲೊಬ್ಬಳಾದ ಮಂಡೋದರೀ ದೇವಿಯು ಮೃತಪಡುವುದನ್ನು ನೆನೆದು ನೆನೆದು ಸಂತಾಪಪಡುತ್ತಿರುವ ಪ್ರಭುವು ಆನಂದೋತ್ಸವದಲ್ಲಿ ಭಾಗಿಯಾದಾನೆ? ಆದಿಶಕ್ತಿಯಂತೆ ಯುದ್ಧ ಮಾಡಿ, ಪತಿಯಕಡೆಗೆ ಪ್ರಯೋಗವಾಗಿದ್ದ ಈಟಿಯ ಪ್ರಹಾರವನ್ನು ತಪ್ಪಿಸಲು ಸರಕ್ಕನೆ ಮಧ್ಯಕ್ಕೆ ಸುಳಿದು, ಈಟಿಯಿಂದ ಆಹತಳಾಗಿ

ಮೂರ್ಛೆಹೊಂದಿದ ಮಹಾಸತಿಯನ್ನು ನೆನಪಿಗೆ ತಂದುಕೊ. ನಮ್ಮ ಮನಸ್ಸಿನಲ್ಲಿ ತಾನೇ ಸಂತೋಷಕ್ಕೆ ಸ್ಥಳವಿದೆಯೆ?

**ಸುಷೇಣ.**—ಶ್ರೀರಾಮಚಂದ್ರನ ಆಜ್ಞೆಯಂತೆ ನಾನು ಎಷ್ಟು ಕಷ್ಟಪಟ್ಟು ಎಂತಹ ರಾಜಚಿಕಿತ್ಸೆಮಾಡಿಯೂ ಸಾರ್ಥಕವಾಗದೆ ಹೋಯಿತು. ವೈದ್ಯನೆಂದು ಹೇಳಿಕೊಳ್ಳುವುದಕ್ಕೇ ನನಗೆ ನಾಚಿಕೆಯಾಗುವುದು.

**ಅಂಗದ.**—ಮೃತ್ಯುವಿನ ಮುಂದೆ ಮರ್ತ್ಯರದೇನು ಸಾಗುವುದು?

**ಸುಷೇಣ.**—ರಾವಣನನ್ನು ಶಿಬಿರಕ್ಕೆ ಕೊಂಡೊಯ್ದಮೇಲೆ, ಆಕೆಯು ಮೂರ್ಛೆಯಿಂದ ಎಚ್ಚರಗೊಂಡು, ಹೇಗಾದರೂ ಮಾಡಿ ತನಗೆ ಮತ್ತೆ ಪತಿದರ್ಶನ ಮಾಡಿಸಬೇಕೆಂದು ಬಯಸಿದಳು. ಎಂತಹ ಶುದ್ಧವಾದ ಪತಿಪ್ರೇಮವೋ ಅವಳಮ! ತಾತ್ಕಾಲಿಕವಾಗಿ ಚೈತನ್ಯವುಂಟಾಗುವಂತೆ ನಾನು ಪ್ರಯೋಗಿಸಿದ ಔಷಧವಾದರೂ ಹಿಡಿಯಿತಲ್ಲಾ! ಅದೇ ನನ್ನದೊಂದು ಪುಣ್ಯ. ಅವಳನ್ನು ಮೇನದೊಳಗೆ ಕುಳ್ಳಿರಿಸುವುದು ಕೂಡ, ಬಹಳ ಕಷ್ಟವಾಯಿತು.

**ಜಾಂಬವ.**— ಆಂಜನೇಯನ ದುಃಖವನ್ನು ನೋಡಿ ನನ್ನ ಅಂತಃಕರಣವು ಕರಗಿಹೋಯಿತು. ಪಾಪ! ತನ್ನ ಪ್ರಾಣವನ್ನುಳಿಸಿದವಳ ಪ್ರಾಣಹರಣವನ್ನು ಕಂಡು ಅವನು ಹೇಗೆತಾನೆ ಸೈರಿಸಬಲ್ಲನು?

**ಸುಗ್ರೀವ.**—ಅಂಗದ! ಮಂಡೋದರೀ ದೇವಿಯ ಕೊನೆಯ ಪ್ರಾರ್ಥನೆಯನ್ನು ಸೀತಾದೇವಿಗೆ ತಿಳಿಸಿದೆಯಾ? ಸೀತಾಮಾತೆಯು ಏನೆಂದಳು?

**ಅಂಗದ.**—ಸ್ನೇಹಸೌಹಾರ್ದಗಳ ಮತ್ತು ಸಹೋದರೀ ಭಾವನೆಯ ಸ್ವಾತಂತ್ರ್ಯದಿಂದ ಮಂಡೋದರೀ ದೇವಿಯು ತಿಳಿಸಿದ ಮಾತುಗಳನ್ನು ನನ್ನಿಂದ ಕೇಳಿ, ಸೀತಾಮಾತೆಯು ಕಂಬನಿದುಂಬಿದಳು. ಸೀತಾದೇವಿ! ನಾನು ನನ್ನ ಪತಿಯ ಶಿಬಿರಕ್ಕೆ ಹೊರಟಿರುವೆನು. ನನ್ನ ಪತಿಯ ಶಿಬಿರವು ನಿನಗೆ ಶತ್ರು ಶಿಬಿರ. ಅಪರಾಧಿಯ ಶಿಬಿರ. ಅಲ್ಲಿಗೆ ಬರುವುದು ನಿನಗೆ ಅಸಹ್ಯಕರವೆಂಬುದನ್ನೂ ನಾನು ಬಲ್ಲೆ. ಆದರೂ, ನಿನ್ನ ದೇವಮೂರ್ತಿಯನ್ನು ನೋಡದೆ, ನಿನ್ನ ಪ್ರೀತಿಮಯವಾದ ಆಲಿಂಗನವನ್ನು ಪಡೆಯದೆ ನಾನು ಸಾಯಲಾರೆ. ನನ್ನಲ್ಲಿ ಅನುಗ್ರಹ ಮಾಡಿ ಅಲ್ಲಿಗೆ ಬಾ" ಎಂಬ ಮಾತುಗಳನ್ನು ಕೇಳಿ ಸೀತಾಮಾತೆಯು ಅತ್ತುಬಿಟ್ಟಳು. ಪಲ್ಲಕ್ಕಿಯಲ್ಲಿ ಕುಳಿತುಕೊಳ್ಳುವಾಗ ಶೋಕಭರದಿಂದ ಅವಳ ದೇಹವೇ ಕಂಪಿಸುತ್ತಿದ್ದಿತು.

**ಜಾಂಬವ.**--ಇಂತಹ ಸ್ವಾಮಿನಿಯನ್ನು ಪಡೆದ ನಾವೇ ಧನ್ಯರು.

**ಅಂಗದ.**—ಶ್ರೀರಾಮಚಂದ್ರನೂ ಅದಕ್ಕೆ ಸಮ್ಮತಿಸಿದ್ದುದನ್ನು ಕೇಳಿ ಸೀತಾದೇವಿಯು ಭಕ್ತಿಯಿಂದ ಆಕಾಶದ ಕಡೆಗೆ ಕೈಮುಗಿದಳು. ಕಂಬನಿಯನ್ನು ಸುರಿಸುತ್ತ, ಆತನಿಗೆ ತನ್ನ ಪ್ರಣಾಮಗಳನ್ನು ತಿಳಿಸುವಂತೆ ನನಗೆ ಅಪ್ಪಣೆಮಾಡಿ, ರಾವಣನ ಶಿಬಿರದ ಕಡೆಗೆ ಹೊರಟು ಹೋದಳು.

**ಸುಗ್ರೀವ.**—ರಾಮಚಂದ್ರನ ಸಮ್ಮತಿಯನ್ನೂ ಪಡೆದಿದ್ದೆಯಾ?

**ಅಂಗದ.**—ಹಿಂದೆ ಧ್ಯಾನಮಗ್ನನಾಗಿದ್ದ ರಾವಣನ ಬಳಿಗೆ ಹೋಗಿ ಬಂದ ದಿನ ರಾಮಚಂದ್ರನು ಕ್ರುದ್ಧನಾದುದನ್ನು ನಾನು ಮರೆಯಬಲ್ಲೆನೆ? ಆತನ ಅಪ್ಪಣೆಯನ್ನು ಪಡೆದೇ ನಾನು ಅಶೋಕವನಕ್ಕೆ ಹೋದುದು.

**ಸುಗ್ರೀವ.**—ವತ್ಸ! ಸ್ವಾಮಿಯು ಏನೆಂದನು?

**ಅಂಗದ.**—ಆತನು ಕಷ್ಟದಿಂದ ಶೋಕವನ್ನು ತಡೆದು ಕೊಂಚ ಗದ್ಗದ ಧ್ವನಿಯಿಂದ "ಆಗಬಹುದು. ಅಶೋಕವನಕ್ಕೆ ಹೊರಡು. ಮಂಡೋದರೀ ದೇವಿಯು ನಮ್ಮ ಪ್ರಾಣಗಳನ್ನೇ ಕೇಳಿದರೂ ಇಲ್ಲವೆನ್ನುವುದಿಲ್ಲ" ಎಂದನು. ಆ ಬಳಿಕ ರಕ್ತದಿಂದ ನೆನೆದಿದ್ದ ಬಟ್ಟೆಗಳನ್ನೂ, ಶಿರಸ್ತ್ರಾಣವನ್ನೂ ತೆಗೆದುಹಾಕಿ ಸ್ನಾನಮಾಡಲು ಬಿಜಯಮಾಡಿದನು.

**ಜಾಂಬವ.**—ನೀಲ! ಇನ್ನಾದರೂ ಅರ್ಥವಾಯಿತೆ? ಅದಿರಲಿ. ಸೀತಾದೇವಿಯ ಪ್ರಣಾಮಗಳನ್ನು ಬಿನ್ನವಿಸಲು ಅಂಗದನು ಹೋಗುವ ವೇಳೆಗೆ ಪ್ರಭುವು ವಿಭೀಷಣನಿಗೆ ಸಮಾಧಾನ ಹೇಳಿ ಸಂತೈಸಿ ರಾವಣೇಶ್ವರನ ಬಳಿಗೆ ಕಳುಹಿಸಿದ್ದನಂತೆ. ನಾವೂ ಆತನ ಅಪ್ಪಣೆಯನ್ನು ಎದುರುನೋಡುತ್ತ ಶಿಬಿರದ ಮುಖಭಾಗದಲ್ಲೇ, ನಿಂತಿರೋಣ; ಬನ್ನಿ ಅಲ್ಲಿಗೆ ಹೋಗೋಣ.

**ನೀಲ.**—ವಿಭೀಷಣನಿಗೆ ರಾವಣನಲ್ಲೆಷ್ಟು ಪಕ್ಷಪಾತ! ತನ್ನನ್ನು ಓಲೈಸಿದ ಕಪಿಗಳಿಗಿಂತಲೂ, ತನ್ನನ್ನು ವಧಿಸುವುದರಲ್ಲಿದ್ದ ಅಣ್ಣನಲ್ಲಿ ಹೆಚ್ಚು ಪ್ರೀತಿ. ನಮ್ಮನ್ನು ಬಿಟ್ಟು ಅಲ್ಲಿಗೆ ತೆರಳಿದ್ದಾನೆ.

**ಜಾಂಬವ.**—ನೀಲ! ನೀನು ಅಪಂಡಿತನೆಂಬುದಕ್ಕೆ ಇದೂ ಒಂದು ನಿದರ್ಶನ. ವಿಭೀಷಣನ ಹೃದಯವನ್ನು ನೀನರಿಯೆ. ಸಹೋದರ ಪ್ರೇಮದಿಂದಲೂ, ಧರ್ಮ ಪಕ್ಷಪಾತದಿಂದಲೂ ಅವನ ಹೃದಯದಲ್ಲಿ ಮೊದಲಿನಿಂದಲೂ ನಡೆಯುತ್ತಿದ್ದ ಒಳತೋಟಿಯನ್ನು ನೀನರಿಯೆ. ಅದರಿಂದ ಹೀಗೆ ಹೇಳುತ್ತಿರುವೆ. ಬನ್ನಿ, ಶಿಬಿರದ ಮುಖ ಭಾಗದ ಬಳಿಗೆ ಹೋಗೋಣ.

**ನೀಲ.**—ಸುಗ್ರೀವನು ಆಗಲೇ ಆಜ್ಞಾಪಿಸಿದಂತೆ ನಾನೂ ಸೈನಿಕರಿಗೆ ಸಮಾಧಾನ ಹೇಳುವೆನು. ರಾಮಚಂದ್ರನ ಆಜ್ಞೆಯನ್ನು ತಿಳಿಸುವೆನು.

(ಎಲ್ಲರೂ ಹೋಗುವರು.)

---

## ದೃಶ್ಯ ೩

[ರಾವಣನ ಶಿಬಿರ. ರಾವಣನು ಮರಣಶಯ್ಯೆಯಲ್ಲಿ ಮಲಗಿರುವನು. ಪರಿವಾರದವರೆಲ್ಲರೂ ನಿಸ್ತೇಜರಾಗಿರುವರು. ಸಮಯ: ಸಂಧ್ಯಾಕಾಲಕ್ಕೆ ಸ್ವಲ್ಪ ಮುಂಚೆ.]

**ರಾವಣ.**—ದುರಂತವಾದ ಹೃದಯ ಯಾತನೆಯೊಡನೆ ಜೀವನವು ಕೊನೆಗಾಣುವ ಸಮಯವು ಸನ್ನಿಹಿತವಾಯಿತು. ಸೀತಾದೇವಿ! ನೀನು ಜಗದ್ವಂದ್ಯಳು! ಲೋಕೈಕವೀರನಾದ ರಾಮಚಂದ್ರನನ್ನು ವರಿಸಿರುವ ನೀನೇ ಭಾಗ್ಯಶಾಲಿನಿ. ನನ್ನ ಅಪರಾಧವನ್ನು ಮನ್ನಿಸು....ಸಂಕಟ.... ಸಂಕಟ....ವತ್ಸ, ವಿಭೀಷಣ! ನನ್ನ ಕೆಲಸವು ಪೂರೈಸಿತು. ನನ್ನ ಸತ್ಸಂಕಲ್ಪಗಳಿಗೆಲ್ಲ ಸಜೀವ ಸಮಾಧಿಯಾಯಿತು. ವತ್ಸ! ಇನ್ನು ಮುಂದೆ ನೀನೇ ಚಕ್ರವರ್ತಿ. ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತ ಸುಖವಾಗಿ ಬಾಳು. ಮಂಡೋದರಿಯು ಇನ್ನೂ ಬರಲಿಲ್ಲವಲ್ಲಾ! ಎಷ್ಟು ಬಾಧೆಯಾಗಿದೆಯೋ ಅವಳಿಗೆ! ನನ್ನ ಭಂಡಾರದಲ್ಲಿರುವ ಸುವಸ್ತುಗಳಲ್ಲಿ ಕಾಲು ಭಾಗವನ್ನು ಸೀತಾದೇವಿಗೆ ಬಳುವಳಿಯಾಗಿ ಕೊಟ್ಟಿರುವೆನು. ಉಳಿದುದರಲ್ಲಿ ಅರ್ಧ ಭಾಗವನ್ನು ಪಾತ್ರವರಿತು ಪ್ರಜೆಗಳಿಗೆ ದಾನಮಾಡು. ಮಿಕ್ಕ ಸುವಸ್ತುನಿಚಯವೆಲ್ಲಾ ನಿನ್ನದು.

(ನೇಪಥ್ಯದಲ್ಲಿ ಪ್ರಜೆಗಳೆಲ್ಲರೂ "ಲಂಕೆಯ ಲಕ್ಷ್ಮಿಯಾದ ಮಂಡೋದರೀದೇವಿ, ಅಯ್ಯೋ! ಅಯ್ಯೋ!" ಎಂದು ಕೂಗಿಕೊಳ್ಳುತ್ತಿರುವಲ್ಲಿ, ಮಂಡೋದರಿಯು ಆಂಜನೇಯನ ಸಹಾಯದಿಂದ ಮೆಲ್ಲಗೆ ಹೆಜ್ಜೆಯನ್ನಿಡುತ್ತ ಪ್ರವೇಶಿಸು

ವಳು. ರಾವಣನನ್ನು ಕಂಡೊಡನೆಯೆ ಆವೇಶಗೊಂಡವಳಂತೆ ಅವನ ಬಳಿಗೆ ಹೋಗುವಳು.)

**ಮಂಡೋದರಿ.**—(ರಾವಣನ ಪಾದದಮೇಲೆ ತಲೆಯನ್ನಿಟ್ಟು) ಪ್ರಾಣನಾಥ! ನನ್ನ ಕೊನೆಯ ಸೇವೆ.

**ಆಂಜನೇಯ.**—ಸೀತಾಮಾತೆಗೆ ಸರಿಹೋಗುವವಳು ಇವಳೊಬ್ಬಳೇ. ಎಂತಹ ಪತಿಪ್ರೇಮ! (ಕಂಬನಿದುಂಬಿ ಗದ್ಗದ ಸ್ವರದಿಂದ) ಅಯ್ಯೋ! ಅನರ್ಘ್ಯವಾದ ಜೀವರತ್ನವೊಂದು ಪುಡಿಯಾಯಿತು.

**ಸೀತಾದೇವಿ.**—(ಪ್ರವೇಶಿಸಿ) ಆಂಜನೇಯ! ಸುಷೇಣನೂ ದೇವಿಯನ್ನುಳಿಸಲಾರದೆ ಹೋದನೆ? (ಮಂಡೋದರಿಯ ಬಳಿಗೆ ಹೋಗುವಳು.)

**ಆಂಜನೇಯ.**—(ಸೀತಾದೇವಿಗೆ ನಮಸ್ಕರಿಸಿ ಮೇಲಕ್ಕೆದ್ದು) ಮಂಡೋದರೀ ದೇವಿಯನ್ನುಳಿಸಿದವರಿಗೆ ಅಯೋಧ್ಯೆಯ ರಾಜ್ಯವನ್ನು ಕೊಟ್ಟು, ತಾನು ಸತೀ ಸಹೋದರರೊಡನೆ ವನವಾಸವನ್ನು ಕೈಕೊಳ್ಳುವುದಾಗಿ ಪ್ರಭು ರಾಮಚಂದ್ರನು ತಿಳಿಸಿದನು. ಯಾರ ಚಿಕಿತ್ಸೆಯಿಂದಲೂ ಫಲವಾಗಲಿಲ್ಲ. ಸ್ವಲ್ಪಕಾಲ ಮಾತ್ರ ಪ್ರಾಣದಾಯಕವಾಗುವಂತೆ ಸುಷೇಣನು ಮೂಲಿಕಾ ಪ್ರಯೋಗ ಮಾಡಿದ್ದಾನೆ.

**ರಾವಣ.**—(ಏಳಲು ಪ್ರಯತ್ನಿಸಿ ಮತ್ತೆ ಹಿಂದಕ್ಕೆ ಬಿದ್ದು) ಮಂಡೋದರಿ! ನನ್ನ ಮುದ್ದು ಗಿಳಿ! ನನ್ನ ಹೃದಯದಲ್ಲಿ ಈಗಿರುವುದು ನಿನ್ನ ಮೋಹನಮೂರ್ತಿಯೊಂದೇ. (ಸಂಕಟವನ್ನು ಸೂಚಿಸುವನು.) ನೀನು ಮೊದಲೇ ರಣರಂಗಕ್ಕೆ ಬಂದಿದ್ದರೆ ನಾನೇ ಜಯಿಸುತ್ತಿದ್ದೆನೋ ಏನೋ! ನಿನಗೂ ತೋರಲಿಲ್ಲ....ನಾನೂ ಕೇಳಲಿಲ್ಲ....ಮಾಯೆಯ ಕಾವಳ....ನಾನು ನಿನ್ನಲ್ಲಿಯೂ, ಸೀತೆಯಲ್ಲಿಯೂ ಎಷ್ಟು ಅಪರಾಧಿ! ಮಂಡೋದರಿ, ಮಂಡೋದರಿ,....(ಸಂಕಟಪಡುವನು. ಪರಿಜನರು ಬಲವಾಗಿ ಗಾಳಿ ಹಾಕುವರು.)

**ಮಂಡೋದರಿ.**—(ಕಂಬನಿದುಂಬಿ) ಆರ್ಯಪುತ್ರನ ಅವಸ್ಥೆ ಯನ್ನು ನೋಡಲಾರೆ, ಆರ್ಯಪುತ್ರ! ನಿನ್ನ ಪ್ರೇಮಕ್ಕೆ ಪಾತ್ರಳಾದ ನಾನೇ ಧನ್ಯಳು. ನನ್ನ ಜೀವನದ ಚೈತನ್ಯವೇ ನೀನು! ನನ್ನ ಕಥೆಯು ಮುಗಿಯುತ್ತಬಂದಿತು. (ಸೀತಾದೇವಿಯು ಕಣ್ಣೀರನ್ನು ಸುರಿಸುತ್ತ ಅವಳನ್ನು ಆಲಿಂಗಿಸಿ ಹಿಡಿದುಕೊಳ್ಳುವಳು.) ತಂಗಿ, ಸೀತಾದೇವಿ! ಆಲಿಂಗಿಸು ತಾಯಿ. ಈ ಸುಖವು ಪರಲೋಕದಲ್ಲೆಲ್ಲಿ ದೊರೆಯುವುದು! ನನ್ನನ್ನು ಬಿಗಿಯಾಗಿ ಅಪ್ಪು. ಆಂಜನೇಯ! ನಿನ್ನ ಸಹಾಯದಿಂದ ಪತಿಯನ್ನು ಕೊನೆಯ ಸಾರಿ ನೋಡುವ ಭಾಗ್ಯವನ್ನು ಪಡೆದೆನು. (ರಾವಣನ ಪದತಲದ ಬಳಿಯಲ್ಲಿ ಸೀತೆಯು ಅವಳನ್ನು ಒಂದು ಆಸನದಲ್ಲಿ ಕುಳ್ಳಿರಿಸುವಳು.)

**ಆಂಜನೇಯ.**—(ಕಂಬನಿಯನ್ನು ಸುರಿಸುತ್ತ ನಮಸ್ಕರಿಸಿ) ಮಾತೆ! ಮಾತೆ! ನನ್ನದು ನಿಜವಾಗಿಯೂ ವಜ್ರಹೃದಯ. ಆದಕ್ಕೇ ಈ ಹಾಳು ಹೃದಯವು ಇನ್ನೂ ಸೀಳಿಹೋಗಲಿಲ್ಲ.

**ಮಂಡೋದರಿ.**—ಏಳು, ಏಳು, ಸ್ವಾಮಿಭಕ್ತಿಪರಾಯಣ, ಏಳು. ನಿನ್ನಂತಹ ಸ್ವಾಮಿನಿಷ್ಠರು ಜಗತ್ತಿಗೇ ಅಲಂಕಾರಪ್ರಾಯರು. ವಿಭೀಷಣ, ನಿನ್ನ ವಿಷಯದಲ್ಲಿ ನಾನು ಬಿರುನುಡಿಗಳನ್ನಾಡಿರುವೆನು. ಕ್ಷಮಿಸು. ಆ ಕಾಲವು ಆಗಿಹೋಯಿತು. ಈಗ ನನ್ನ ಮನಸ್ಸಿನಲ್ಲಿರುವುದು ಪ್ರೀತಿಯೊಂದೇ.

**ವಿಭೀಷಣ.**—(ಓಡಿಬಂದು ನಮಸ್ಕರಿಸಿ ಗದ್ಗದ ಸ್ವರದಿಂದ) ಬೇಡ! ಮಾತೆ, ನನ್ನ ಹೃದಯವನ್ನು ಸೀಳಬೇಡ, ನೀನು ಸತ್ಯಲೋಕದ ದೇವಿ. ನಮಗೆಲ್ಲಿ ನಿನ್ನ ಸೇವಾ ಭಾಗ್ಯ! ಪಾಪಿಷ್ಠರಿಗೆ ಅದು ಸಿಕ್ಕೀತೆ? ಮಾತೆ! ನೀನು ಸತ್ತು ಬದುಕುವವಳು. ನಾವು ಬದುಕಿ ಸತ್ತವರು.

**ಮಂಡೋದರಿ.**—ವಿಭೀಷಣ! ನನ್ನ ಅಂತರಾತ್ಮವು ಲಂಕೆಯನ್ನು ಬಿಟ್ಟು ಹೋಗಲಾರದು. ನನ್ನ ದೇಹವು ಬಿದ್ದುಹೋದರೂ,

ನನ್ನ ಆತ್ಮವು ಪತಿ ಪುತ್ರರ ಆತ್ಮಗಳೊಡನೆ ಲಂಕಾರಾಜ್ಯದ ಎಲ್ಲೆಡೆಗಳನ್ನೂ ವ್ಯಾಪಿಸುವಂತೆ ಸರ್ವಮಂಗಳೆಯು ಅನುಗ್ರಹಿಸಬಾರದೆ! ವಿಭೀಷಣ! ಸಮಸ್ತ ವಿಧಗಳಲ್ಲೂ ನೀನು ಲಂಕಾ ಮಾತೆಯನ್ನು ಸೇವಿಸು. ಸಚ್ಚರಿತ್ರನಾಗಿ ಬಾಳು. ವಿಭೀಷಣ! ಪ್ರಜೆಗಳನ್ನು ಮಕ್ಕಳಂತೆ ಕಾಪಾಡು. ರಾವಣೇಶ್ವರ ಭೂಪಾಲನಿಗಿಂತ ಮಿಗಿಲೆನಿಸುವಂತೆ ಪ್ರಜಾಭ್ಯುದಯವನ್ನು ಸಾಧಿಸಿ ಧನ್ಯನಾಗು. ಆರ್ಯಪುತ್ರನು ಒಂದು ಕ್ಷಣವೂ ರಾಜಧರ್ಮವನ್ನು ಅಲಕ್ಷ್ಯಮಾಡಿಲ್ಲವೆಂಬುದನ್ನು ನೆನಪಿನಲ್ಲಿಡು. ನಾವಿಬ್ಬರೂ ಪ್ರಜೆಗಳನ್ನು ಬಿಡಲಾರದೆ ಬಿಟ್ಟುಹೋಗುತ್ತಿದ್ದೇವೆ. ಅಯ್ಯೋ! ಆರ್ಯಪುತ್ರನು ಎಷ್ಟು ಸಂಕಟ ಪಡುತ್ತಿದ್ದಾನೆ! ಇಂತಹ ಸಮಯದಲ್ಲಿ ಅವನನ್ನು ಸೇವಿಸಲು ನನಗೆ ಶಕ್ತಿಯಿಲ್ಲವಲ್ಲಾ! ಅಯ್ಯೋ, ಹೇಗೆ ಸಹಿಸಲಿ?

**ವಿಭೀಷಣ.**—(ಅಳುತ್ತ, ಅಳುತ್ತ, ಬಂದು ಮಂಡೋದರಿಯ ಕಾಲುಗಳನ್ನು ಹಿಡಿದುಕೊಂಡು) ಸಾತ್ವಿಕ ಪ್ರೇಮವೇ ಸ್ತ್ರೀರೂಪವನ್ನು ಧರಿಸಿರಬೇಕು. ತಾಯಿ! ನೀನು ಸರ್ವಮಂಗಳೆಯ ಅವತಾರ. ಲಂಕೆಯ ವೈಭವವು ಇಲ್ಲಿಗೆ ಮುಗಿಯಿತು.

**ಮಂಡೋದರಿ.**—ವತ್ಸ! ಪ್ರೀತಿಭರದಲ್ಲಿ ಅಳತೆಗೆಟ್ಟು ಮಾತನಾಡಬೇಡ. (ಅವನ ತಲೆಯ ಮೇಲೆ ಕೈಯಿಟ್ಟು) ಸುಖವಾಗಿ ಬಾಳು, ಶುದ್ಧ ಹೃದಯದಿಂದ ಲಂಕಾ ಮಾತೆಯನ್ನು ಸೇವಿಸಿ ಧನ್ಯನಾಗು. (ವಿಭೀಷಣನು ಮೇಲಕ್ಕೆದ್ದು ನಿಲ್ಲುವನು.) ಮೂಲಿಕೆಯಿಂದ ಕೃತಕವಾಗಿ ದೊರೆತಿದ್ದ ತ್ರಾಣವೂ ಹೋಯಿತು. ಸಂಕಟ, ಸಂಕಟ....

**ಸೀತಾದೇವಿ.**—ಅಯ್ಯೋ! ಇದನ್ನು ನೋಡಿ ಸೈರಿಸಲಾರೆ.

**ಮಂಡೋದರಿ.**—ಎಲ್ಲವೂ ಸರ್ವಮಂಗಳೆಯ ಲೀಲೆ. ಸೀತಾದೇವಿ! ಲೋಕವಂದಿತೆಯಾದ ನನ್ನ ಸಹೋದರಿ! ನನ್ನದೊಂದು ಯಾಚನೆಯುಂಟು.

**ಸೀತಾದೇವಿ.**—ಅಕ್ಕ! ಯಾಚನೆಯೆನ್ನಬೇಡ. ಅಯ್ಯೋ! ಹಾಗೆನ್ನಬೇಡ, ಅದು ಅನುಗ್ರಹ. ಹೇಳು, ಹೇಳು. ನನ್ನ ಪ್ರಾಣ ವನ್ನು ಬೇಕಾದರೂ ಕೊಡಬಲ್ಲೆ.

**ಮಂಡೋದರಿ.**—ತಂಗಿ! ನಮ್ಮ ಸ್ನೇಹದ ಗುರುತಾಗಿ, ನಮ್ಮ ಪ್ರೀತಿಯ ನೆನಪಾಗಿ ಒಂದು ಕಾರ್ಯವನ್ನು ಮಾಡುವೆಯಾ? ....ಸಂಕಟ.

**ಸೀತಾದೇವಿ.**—ಹೇಳು, ಹೇಳು. ಆಜ್ಞೆಯೆಂದು ಭಾವಿಸಿ ಆನಂದದಿಂದ ಮಾಡುವೆನು. ಈ ದೇಹವನ್ನೇ ಬೇಕಾದರೂ ಅರ್ಪಿಸು ವೆನು.

**ಮಂಡೋದರಿ.**—ತಂಗಿ! ನನ್ನ ಅಂತಃಪುರದಲ್ಲಿರುವ ಸಮಸ್ತ ವಸ್ತುಗಳನ್ನೂ ನನ್ನ ಜ್ಞಾಪಕಾರ್ಥವಾಗಿ ನೀನು ಸ್ವೀಕರಿಸಿ ಅಯೋಧ್ಯೆಗೆ ತೆಗೆದುಕೊಂಡು ಹೋಗಬೇಕು. ಇದೇ ನನ್ನ ಕೊನೆಯ ಕೋರಿಕೆ.

**ಸೀತಾದೇವಿ.**—(ಬಿಕ್ಕಿ ಬಿಕ್ಕಿ ಅಳುತ್ತ ಮಂಡೋದರಿಯ ಕಂಠ ವನ್ನಾಲಿಂಗಿಸಿ) ಅಕ್ಕ! ನೀನು ಪ್ರೀತಿಮಯಿ. ಸ್ನೇಹಮಯಿ. ವಿಶ್ವಪ್ರೇಮಿ ಯಾದ ದೇವಿ. ನಿನ್ನನ್ನು ಕಳೆದುಕೊಳ್ಳುವ ನಾವೆಲ್ಲರೂ ಹತಭಾಗ್ಯರು. ಅಯ್ಯೋ!

**ಮಂಡೋದರಿ.**—(ಪ್ರಯತ್ನಪೂರ್ವಕವಾಗಿ ರಾವಣನ ಹೆಜ್ಜೆಯ ಮೇಲೆ ತಲೆಯನ್ನಿಟ್ಟು, ಮತ್ತೆ ಕಷ್ಟದಿಂದ ತಲೆಯನ್ನು ಮೇಲಕ್ಕೆತ್ತಿ) ಇದೇ ಈ ದಿವ್ಯಪಾದಕ್ಕೆ ನನ್ನ ಕೊನೆಯ ವಂದನೆ. ಜನ್ಮ ಜನ್ಮಾಂತರ ಗಳಲ್ಲೂ ಆರ್ಯಪುತ್ರನೇ ನನಗೆ ಪತಿಯಾಗಲಿ! ಪುಣ್ಯವಿದ್ದರೆ, ಲಂಕೆಯಲ್ಲೇ ನಮಗೆ ಜನ್ಮವಾಗಲಿ! (ರಾವಣನ ಪಾದಗಳ ಮೇಲೆ ತಲೆಯನ್ನೂರಿ ಸಂಕಟಪಡುವಳು.)

**ರಾವಣ.**—ಹೃದಯೇಶ್ವರಿ! ನಾನೇ ನಿನಗೆ ಮೃತ್ಯುವಾದೆನೆ!

ಮಂಡೋದರಿ, ಮಂಡೋದರಿ, ನೀನು ನನ್ನ ಜೀವದ ಗೆಳತಿಯಾಗಿದ್ದೆ, ನನ್ನ ಹೃದಯದ ಬೆಳಕಾಗಿದ್ದೆ, ಜಗತ್ತಿಗೇ ಜೀವರತ್ನವಾಗಿದ್ದೆ. ಪಾಪಿ ರಾವಣನಿಂದ........

**ಮಂಡೋದರಿ.**—(ಅತಿ ಕಷ್ಟದಿಂದ ತಲೆಯನ್ನೆತ್ತಿ) ಆ....ರ್ಯ.... ಪು....ತ್ರ....ಹಾಗೆನ್ನಬೇಡ....ನೀನೇ ನನ್ನ ಸರ್ವ ಸೌಭಾಗ್ಯ. ನಿನ್ನ ಸೇವೆಯಿಂದ....ನಾನು....ಧನ್ಯಳು....(ಬೀಳುವಳು.)

**ಸೀತಾದೇವಿ.**—(ಕಂಬನಿದುಂಬಿ ಮಂಡೋದರಿಯನ್ನಾಲಿಂಗಿಸಿ) ಅಕ್ಕಾ! ನನ್ನನ್ನು ಬಿಟ್ಟು ಎಲ್ಲಿಗೆ ಹೋಗುವೆ?

**ಮಂಡೋದರಿ.**—(ಮಾತನಾಡಲು ಯತ್ನಿಸಿ, ಸಂಕಟದಿಂದ) ತಂಗಿ!....(ಮುಂದೆ ಮಾತನಾಡಲು ಪ್ರಬಲವಾಗಿ ಪ್ರಯತ್ನಿಸಿ, ಸಾಧ್ಯವಿಲ್ಲದೆ, ಪ್ರಾಣವನ್ನು ತ್ಯಜಿಸುವಳು.)

**ಸೀತಾದೇವಿ.**—(ಗದ್ಗದ ಸ್ವರದಿಂದ) ಲಂಕೆಯ ಅಮೃತಲತೆಯು ಒಣಗಿಹೋಯಿತು! ಭೂಮಿಯು ಇನ್ನು ಬಡವಾಯಿತು! ಅಯ್ಯೋ! ನನಗೆ ಏನನ್ನೋ ಹೇಳಬೇಕೆಂದಿದ್ದಳು. ಮಂಡೋದರೀ ದೇವಿಯ ಸ್ಮರಣೆಯಿಂದ ಮಹಾಪಾತಕವೂ ನಾಶವಾಗುವುದು. ಸ್ತ್ರೀಜಾತಿಯ ಆದರ್ಶ ಕುಸುಮವು ಮಾಯವಾಯಿತು. ಸೂರ್ಯ ಚಂದ್ರರಿದ್ದೂ ಇನ್ನು ಕತ್ತಲೆಯೇ. ಪ್ರಪಂಚದ ಬೆಳಕು ಮುಳುಗಿಹೋಯಿತು. ಅಯ್ಯೋ!

**ರಾವಣ.**—(ಬಹು ಸಂಕಟದಿಂದ) ವತ್ಸ! ವಿ....ಭೀ....ಷ. ಣ!.. ನಿನಗೆ...ಮಂ....ಗ....ಳ........

(ಮುಂದೆ ಮಾತು ಹೊರಡದೆ ಸಂಕಟಪಡುವನು. ಮಂಡೋದರಿಯ ಕಡೆಗೇ ದೃಷ್ಟಿಸಿ ನೋಡುತ್ತ ಕಂಬನಿದುಂಬುವನು.)

**ವಿಭೀಷಣ.**—ಅಣ್ಣ! ಅಣ್ಣ! ಈ ಸಂಕಟವನ್ನು ಹೇಗೆ ನೋಡಲಿ?

**ರಾವಣ.**—ಧರ್ಮ. ನಾನು ನಂ....ಬ....ಲಿ....ಲ್ಲ....ನೀನು... ನಂ....ಬು....ಮಂ....ಗ....ಳ.

(ರಾವಣನು ಅಂತರಿಕ್ಷದ ಕಡೆಗೆ ಕೈಮುಗಿದು ತನ್ನ ಹಣೆಯನ್ನು ಎರಡು ಸಾರಿ ಮುಟ್ಟಿ ತೋರಿಸಿ ಸಂಕಟದಿಂದ ಮೃತಪಡುವನು.)

(ತೆರೆಯು ಬೀಳುವುದು.)

**ಸ ಮಾ ಪ್ತಿ.**

## ಇದೇ ಗ್ರಂಥಕರ್ತನಿಂದ ರಚಿತವಾಗಿರುವ ಇತರ ಗ್ರಂಥಗಳು

| | | | | |
|---|---|---|---|---|
| ೧. | ಕಾಳಿದಾಸನು ಶೃಂಗಾರರಸವನ್ನು ಚಿತ್ರಿಸುವ ಬಗೆ | ೧ | ೦ | ೦ |
| ೨. | ಪೈಗಂಬರ ಮುಹಮ್ಮದನು | ೧ | ೮ | ೦ |
| ೩. | ಹಳ್ಳಿಯ ಕಥೆಗಳು | ೦ | ೧೨ | ೦ |
| ೪. | ತುರಾಯಿ (ಕಥೆಗಳ ಸಂಗ್ರಹ) | ೧ | ೮ | ೦ |
| ೫. | ಸುಂದರಿ (ಸಾಮಾಜಿಕ ನಾಟಕ) | ೦ | ೧೨ | ೦ |
| ೬. | ನಚಿಕೇತ (ಪೌರಾಣಿಕ ನಾಟಕ) | ೧ | ೧೨ | ೦ |
| ೭. | ಬುದ್ಧ | ೩ | ೮ | ೦ |
| ೮. | ಹರ್ಷವರ್ಧನ | ೧ | ೮ | ೦ |
| ೯. | ಏಬ್ರಹಾಂ ಲಿಂಕನ್ | ೧ | ೮ | ೦ |
| ೧೦. | ಭಾಸ ಮಹಾಕವಿ | ೪ | ೦ | ೦ |
| ೧೧. | ಚಿತ್ರವಿಮರ್ಶೆ ಮತ್ತು ಇತರ ಕಥೆಗಳು | ೧ | ೧೨ | ೦ |
| ೧೨. | ರಘುವಂಶಸಾರ | ೨ | ೦ | ೦ |
| ೧೩. | ಬ್ರಹ್ಮವಾದಿನಿ | ೨ | ೦ | ೦ |

**ದೊರೆಯುವ ಸ್ಥಳ :—**

**ಸತ್ಯಶೋಧನ ಪುಸ್ತಕ ಭಂಡಾರ,**

ಕೋಟೆ, ಬೆಂಗಳೂರು ಸಿಟಿ.

